ಆಳ್ವಿಕೆಯ ೯ನೆಯ ವರ್ಷವು ಉಕ್ತವಾದ ವಿಜಯಸಂವತ್ಸರಕ್ಕೆ ಸರಿಹೊಂದುವುದಿಲ್ಲ ವಿಜಯ ಸಂವತ್ಸರವು ಕ್ರಿ ಶ ೮೬೩ಕ್ಕೆ ಸಮನಾಗುತ್ತದೆ ಅದು ಆತನ ಆಳ್ವಿಕೆಯ ೩ನೆಯ ವರ್ಷವಾಗುತ್ತದೆ, ೯ನೆಯ ವರ್ಷವಲ್ಲ

ಈ ಸಂಪುಟವಲ್ಲಿರುವ ಸು ೯ನೆಯ ಶತಮಾನಕ್ಕೆ ಸೇರಿದ ಗಂಗರ ಶಾಸನಗಳು ನೀತಿಮಾರ್ಗ ಮತ್ತು ಸತ್ಯವಾಕ್ಯ ಎಂಬ ಬಿರುದನ್ನು ಹೊಂದಿದ್ದ ಇಬ್ಬರ ಆಳ್ವಿಕೆಗೆ ಸಂಬಂಧಿಸಿದುದಾದರೂ ಅವರ ಹೆಸರುಗಳನ್ನು ತಿಳಿಸಿಲ್ಲ ಅವರಿಬ್ಬರನ್ನು ಗುರುತಿಸುವುದು ಸುಲಭವಲ್ಲ ಅಲ್ಲದೆ, ಮೊದಲು ನೀತಿಮಾರ್ಗ, ನಂತರ ಸತ್ಯವಾಕ್ಯ ಈ ರೀತಿ ಪರ್ಯಾಯ ಕ್ರಮದಲ್ಲಿ ಗಂಗ ಅರಸರು ಈ ಬಿರುದುಗಳನ್ನು ಹೊಂದಿದ್ದರೇ ಎಂಬುದನ್ನೂ ಖಚಿತವಾಗಿ ಹೇಳಲಾಗುವುದಿಲ್ಲ ನಂ ಗೂ ೩೧೩ ಮತ್ತು ೩೧೪ನೆಯ ಗಟ್ಟವಾಡಿ ಶಾಸನಗಳನ್ನು ಇದಕ್ಕೆ ನಿದರ್ಶನವಾಗಿ ಕೊಡಬಹುದು ಮೊದಲನೆಯ (ನಂ ಗೂ ೩೧೩) ಶಾಸನವು ಸತ್ಯವಾಕ್ಯ ಕೊಙ್ಗುಣಿವರ್ಮ ಪರ್ಮಾನಡಿಯ ಆಳ್ವಿಕೆಗೆ ಸಂಬಂಧಿಸಿದ್ದು ಆತನ ಆಳ್ವಿಕೆಯ ೫ನಯ ವರ್ಷ ಎಂದು ಕಾಲವನ್ನು ಸೂಚಿಸಲಾಗಿದ ನಂತರದ ಶಾಸನವೂ ಆಳ್ವಿಕೆಯ ೫ನೆಯ ವರ್ಷವನ್ನೇ ಸೂಚಿಸಿದೆ ಆದರೆ ರಾಜನನ್ನು ನೀತಿಮಾರ್ಗ ಪರ್ಮಾನಡಿ ಎಂದು ಹೆಸರಿಸಲಾಗಿದೆ ಪ್ರಾಸಂಗಿಕವಾಗಿ ಗಮನಿಸಬಹುದಾದ ಅಂಶವೆಂದರೆ ಎರಡೂ ಶಾಸನಗಳೂ ಒಂದೇ ಶಿಲೆಯ ಒಂದೊಂದು ಮುಖದಲ್ಲಿ ಕಂಡರಿಸಲ್ಪಟ್ಟಿವೆ ಈ ಎರಡೂ ಶಾಸನಗಳು (ಮೊದಲನೆಯ ಮುದ್ರಣ ನಂ ಗೂ ೯೬ ಮತ್ತು ೯೮) ನೀತಿಮಾರ್ಗನ ಆಳ್ವಿಕೆಯ ಕಾಲದ ಐದನೆಯ ವರ್ಷವೆಂದು ಪರಿಗಣಿಸಿರುವ ಶ್ರೀ ರೈಸ್‌ರವರು ಶಕವರ್ಷದ ನಿರ್ದೇಶನವಿಲ್ಲದಿದ್ದರೂ ಶಾಸನೋಕ್ತ ಅರಸನ ಆಳ್ವಿಕೆಯ ಕಾಲದ ೫ನೆಯ ವರ್ಷ ಕ್ರಿ ಶ ೮೭೫ ಎಂದು ಸೂಚಿಸಿದ್ದಾರೆ[1] ಎರಡೂ ಶಾಸನಗಳಲ್ಲಿ ಉಕ್ತವಾಗಿರುವ ವಿಷಯವೂ ಒಂದೇ ಆಗಿದೆ ಈ ಸತ್ಯವಾಕ್ಯನನ್ನೇ ಎರಡನೆಯ ರಾಚಮಲ್ಲನೆಂದು ಭಾವಿಸುವುದಾದರೆ ಆತನ ಆಳ್ವಿಕೆಯ ೫ನೆಯ ವರ್ಷವು ಸು ಕ್ರಿ ಶ ೮೬೫–೬೬ ಆಗುವುದು ಹಾಗಲ್ಲದೆ ಈತನು ತಂದೆಯಾದ ನೀತಿಮಾರ್ಗ ಎಱೆಗಂಗನೆಂದು ಭಾವಿಸುವುದಾದರೆ ಆತನ ಕಾಲ ಸು ಕ್ರಿ ಶ ೮೪೮–೮೭ ಆಗುತ್ತದೆ ಕ್ರಿ ಶ ೮೭೮ರಲ್ಲಿ ಇಮ್ಮಡಿ ರಾಚಮಲ್ಲನು ಆಳುತ್ತಿದ್ದರೂ ಆತನು ತನ್ನ ಸೋದರಳಿಯನಾದ ಮೊದಲನೆಯ ಬೂತುಗನ ಮಗನಾದ ಎಱೆಗಂಗನನ್ನು ಆಡಳಿತದಲ್ಲಿ ಸಮಭಾಗಿಯಾಗಿ ಮಾಡಿಕೊಂಡು ಇಬ್ಬರೂ ಒಟ್ಟಾಗಿ ಆಳ್ವಿಕೆ ನಡೆಸುತ್ತಿದ್ದರು ರೈಸ್‌ರವರು ಸೂಚಿಸಿರುವ ಕಾಲಾನುಪೂರ್ವಿಯಲ್ಲಿ ಇಮ್ಮಡಿ ರಾಚಮಲ್ಲನು ಸುಮಾರು ೮೭೦–೯೦೭ರ ವರೆಗೆ ಆಳಿದನೆಂದು ಹೇಳಿದ್ದಾರೆ ಆದರೆ ಆತನ ಆಳ್ವಿಕೆ ಎರಡು ದಶಕಗಳ ಮೊದಲೇ ಪ್ರಾರಂಭವಾಗಿತ್ತು

ಪ್ರಾಸಂಗಿಕವಾಗಿ ಈ ಶಾಸನ ಪಾಠಕ್ಕೆ ರೈಸ್‌ರವರು ನೀಡಿರುವ ಭಾಷಾಂತರಕ್ಕೂ, ನಾವು ಇವುಗಳನ್ನು ಅರ್ಥೈಸಿರುವುದಕ್ಕೂ ವ್ಯತ್ಯಾಸಗಳಿವೆ ಎಂಬುದನ್ನು ಗಮನಿಸಬೇಕಾಗಿದೆ " ತಾಯೂರ ಪರೆಕರೆ ಬಸವಯ್ಯನು ಒಡ್ಡಿನ ಬಳಿಯ ತನ್ನ ಜೋಳದ ಹೊಲವನ್ನು ಮಾಡಿ ಆ ನೀರುಳ್ಳ ಸ್ಥಳ (ಸಾಲುಹೊಳೆ-fords ?) ವನ್ನು ಮಾರಗವುಣ್ಡ ಸಾನ್ತಿಗವುಣ್ಡ, ಎಪ್ಪತ್ತು (ಜನ) ಹಳ್ಳಿಮರಿಗ ಕುಂಬಣ್ಣ—ಇವರಿಗೆ ಮತ್ತು ಬಗೆಯ ಚಿಕ್ಕಮಕ್ಕಳನ್ನು ಕಂಡು ಸಂತಸಪಟ್ಟು ಆಕೆಗೆ" ಕೊಟ್ಟನೆಂದು ರೈಸ್‌ರವರು ಆ ಶಾಸನಪಾಠವನ್ನು ಭಾಷಾಂತರಿಸಿದ್ದಾರೆ 'ಎಳೆಮಕ್ಕಳ್' ಎಂಬುದನ್ನು ಚಿಕ್ಕಮಕ್ಕಳು ಎಂದು ಅರ್ಥೈಸಿದ್ದಾರೆ ಆದರೆ ಗ್ರಾಮದ ಸಭೆಗೆ 'ಎಳೆಮಕ್ಕಳ್' ಎಂಬ ಹೆಸರಿದ್ದಿತು ದತ್ತಿ ನೀಡಿದ್ದು ಈ ಸಭೆಗೆ 'ತನ್ನ ಪರವರಿಯ ಜೋಳದ ಕೆಯ್ಯ ಪೞಕವ್ಪುಳದೆಡೆಕೆಯ್ಯಿಸಿ' ಎಂಬುದನ್ನು ನಾವು " ಬೀಳುಬಿದ್ದಿದ್ದ ತನ್ನ ಜೋಳದ ಹೊಲವನ್ನು ಫಲವತ್ತಾದ ಭತ್ತದ ಗದ್ದೆಯಾಗಿ ಪರಿವರ್ತಿಸಿ" ಎಂದು ಅರ್ಥೈಸಿದ್ದೇವೆ ಇಂತಹ ಭೂಮಿಯನ್ನು ಎಪ್ಪದಿಬೊಗ್ಗಪಳ್ಳಿಯ ಮಾರಗವುಣ್ಡ, ಶಾಂತಿಗವುಣ್ಡ ಮತ್ತು ಮರಿಗ ಕುಂಬಣ್ಣರಿಗೆ ದಾನ ಮಾಡಿದನೆಂದು ಹೇಳಿದ್ದೇವೆ

ನಂ ಗೂ ೨೦೪ನೆಯ ಶಾಸನದ ಕಾಲವನ್ನು ಸತ್ಯವಾಕ್ಯ ಕೊಂಗುಣಿವರ್ಮ ಪೆರ್ಮಾನಡಿಯು ಪಟ್ಟಾಭಿಷಿಕ್ತನಾದ ೨೨ನೆಯ ವರ್ಷ ಎಂದು ಹೇಳಿದೆ ಉತ್ತರಿಳ್ಳಗದ ಕೋಟೆಯಲ್ಲಿ ನೊಳಂಬರೊಡನೆ ನಡೆದ ಯುದ್ಧದಲ್ಲಿ ರಾಜೆಯಗಂಗನು ಮೃತಿಹೊಂದಿದ ವಿಷಯವನ್ನು ಆ ಶಾಸನವು ಹೇಳುವದಲ್ಲದೆ, ದೊರೆ ಹಾಗೂ ಎಱೆಯಪ್ಪ ಇಬ್ಬರೂ ಕೂಡಿ ಇಗ್ಗಲಿ ಮತ್ತು ದುಮುಗೆಱೆ ಎಂಬ ಗ್ರಾಮಗಳನ್ನು ಕಲ್ನಾಡಾಗಿ ಕೊಟ್ಟ ವಿಷಯವನ್ನು ಪ್ರಸ್ತಾಪಿಸಿದೆ ಈ ಶಾಸನದ ಕಾಲ ಕ್ರಿ ಶ ೮೭೨–೭೩ ಇರಬೇಕು ಇಲ್ಲಿ ಉಕ್ತವಾಗಿರುವ ನೊಳಂಬರಾಜನು ಮೊದಲನೆಯ ನೊಳಂಬ ಮಹೇಂದ್ರನಿರಬಹುದು (ಸು ಕ್ರಿ ಶ ೮೬೦–೭೫) ಆತ ಕೆಲವು ವರ್ಷಗಳ ನಂತರ ನೀತಿಮಾರ್ಗ ಎಱೆಗಂಗನಿಂದ ಸೋಲಿಸಲ್ಪಟ್ಟು ಕೊಲ್ಲಲ್ಪಟ್ಟನು

[1] ಎ ಕ III, ಮೊದಲನೆಯ ಆವೃತ್ತಿ, Introduction ಪು 4

ನಂ ಗೂ ೧೯೭ನೆಯ ವೀರಗಲ್ಲಿನ ತುಂಡುಶಾಸನವೊಂದು ಯುದ್ಧವೊಂದರಲ್ಲಿ ಜೋ: ೮ ಮೊತ್ತರಸನನ್ನು ಕೊಂದು ಬೇರೆ ಬೇರೆ ನಾಲ್ವರು ಮೃತಿಹೊಂದಿದ ವಿಷಯವನ್ನು ತಿಳಿಸುತ್ತದೆ ಎಱೆಯಪ್ಪ, ಸೆವರ್ಗಾಡಿ ಹಾಗೂ ಮಹಾದೇವಿಯರು ಕೊಟ್ಟ ದಾನದ ವಿಷಯವನ್ನೂ ನಿರೂಪಿಸುತ್ತದೆ ಈ ಮೂವರೂ ಕ್ರಮವಾಗಿ ಇಮ್ಮಡಿ ರಾಜಮಲ್ಲ ಆತನ ರಾಣಿ ಮತ್ತು ಜೊತೆಯಲ್ಲಿಯೇ ಆಳುತ್ತಿದ್ದ ನೊಳಂಬರಳಿಯ ನಾದ ಎಱೆಯಪ್ಪ ಆಗಿರಬಹುದು ಮಹಾದೇವಿ ಎಂಬುದಕ್ಕೆ ಸೆವರ್ಗಾಡಿಯ ರಾಣಿ ಎಂಬಷ್ಟೇ ಅರ್ಥವಿರಬಹುದು ಆದರೆ ಅದು ಆಕೆಯ ಹೆಸರಾಗಿರಬಾರದೇಕೆ? ಶಾಸನದಲ್ಲಿ ಕಾಲನಿರ್ದೇಶವಿಲ್ಲ ಇದು ಸುಮಾರು ೧೦ನೆಯ ಶತಮಾನಕ್ಕೆ ಸೇರಿದ ಶಾಸನ

ನಂ ಗೂ ೩೭೧ನೆಯ ಕ್ರಿ ಶ ೧೦ನೆಯ ಶತಮಾನದ ಭಗ್ನವಾದ ಶಾಸನ ಗಂಗರ ಅರಸನೊಬ್ಬನಿಗೆ ಸೇರಿದುದಾಗಿದೆ ಆದರೆ ಆ ಅರಸನ ಹೆಸರು ನಷ್ಟವಾಗಿದೆ ಶಾಸನದಲ್ಲಿ ಕೇಸವಯ್ಯನೆಂಬೊಬ್ಬ ಶೂರನು ಕದನದಲ್ಲಿ ಇಂದಮರಸರ ದುಂಡಿಗೆಯನ್ನು ಕಸಿದು, ಅದನ್ನು 'ಪೊನ್ನಕೆಯ್ಯು ಎಱೆಯಪ್ಪಂಗೊಪ್ಪಿಸಿದನೆನ್ನು ಭಗದತ್ತನೆಂಬ, ಬಹುಶಃ ಅವನ ಮೇಲಧಿಕಾರಿಯೊಬ್ಬನಿಗೆ, ಇತರ ವಸ್ತುಗಳೊಡನೆ ಕೊಟ್ಟು ಮತ್ತೊಮ್ಮೆ ಕದನರಂಗಕ್ಕೆ ಹಿಂದಿರುಗಿ ಅಲ್ಲಿ ಅಂತಿಮವಾಗಿ ಅಸುವನ್ನು ನೀಗಿದನೆಂದು ಹೇಳಿದೆ ಇಲ್ಲಿ ಉಕ್ತನಾದ ಎಱೆಯಪ್ಪನು ಬೂತುಗ (I) ನ ಮಗ ಎಱೆಗಂಗನಾಗಿರಬಹುದಾದ ಸಾಧ್ಯತೆ ಇದೆ ಮಹೇಂದ್ರನೊಡನೆ ಈತನು ಹೂಡಿದ ಕದನಗಳಲ್ಲಿ ಇದೊಂದಾಗಿದ್ದು ಇದರಲ್ಲಿ ಇಂದಮರಸನೆಂಬಾತನು ಗಂಗರನ್ನು ಎದುರಿಸಿದಂತೆ ತೋರುತ್ತದೆ ಹಾಗಿದ್ದಲ್ಲಿ ಈ ಶಾಸನ ಇಮ್ಮಡಿ ಎಱೆಗಂಗನದೆಂದು ಹೇಳಬಹುದು

ನಂ ಗೂ ೩೨೦ರ ಗಟ್ಟವಾಡಿ ಶಾಸನದ ಕಾಲವು ಶಕವರ್ಷ ೧೧೧ ಅದು ಎಱೆಹವೆಮ್ಮಡಿಯ ಆಳ್ವಿಕೆಯನ್ನು ಪ್ರಸ್ತಾಪಿಸಿದೆ ಶಕವರ್ಷವು ೧೧೧ಕ್ಕೆ ಬದಲು ೭೧೧ ಆಗಿದ್ದು, ಶಾಸನದಲ್ಲಿ ಉಕ್ತವಾದ ಆಂಗೀರಸ ಸಂವತ್ಸರವು ಶಕವರ್ಷ ೭೧೪ಕ್ಕೆ (ಕ್ರಿ ಶ ೭೯೨) ಹೊಂದಿಕೆಯಾಗುವ ಕಾರಣ, ಕ್ರಿ ಶ ೭೯೨ ಶಾಸನಕಾಲವಾಗಿರಬೇಕೆಂಬುದು ರೈಸ್‌ರವರ ಅಭಿಪ್ರಾಯವಾಗಿದೆ ಆದರೆ ಶಾಸನದ ಲಿಪಿಯು ಸ್ಪಷ್ಟವಾಗಿ ೧೦ನೆಯ ಶತಮಾನದ್ದಾಗಿದೆ ಆದ್ದರಿಂದ ಶಾಸನದ ಕಾಲ ಕ್ರಿ ಶ ೯೧೨-೧೩ ಅಥವಾ ಕ್ರಿ ಶ ೯೭೨-೭೩ ಆಗಿರಬಹುದು ಶಕವರ್ಷ ೭೧೧ ಎಂದು ಊಹಿಸಿರುವ ರೈಸ್‌ರವರು ಮುಂದುವರೆದು ಇಲ್ಲಿ ಉಕ್ತವಾಗಿರುವ ಎಱೆಹವೆಮ್ಮಡಿಯು "ಗಂಗರೊಡನೆ ಸ್ನೇಹಸಂಪರ್ಕ ಹೊಂದಿದ ಮಾಂಡಳಿಕ ಮನೆತನ"ವೊಂದಕ್ಕೆ ಸೇರಿದವನೆಂದು ಹೇಳಿ ಆತನು ಸುಮಾರು ೮ ನೆಯ ಶತಮಾನದಲ್ಲಿದ್ದನೆಂದು ಸೂಚಿಸಿದ್ದಾರೆ ಆದರೆ ಶಾಸನವು ನಂತರದ ಕಾಲದ್ದಾಗಿದೆ ಈ ಸಂದರ್ಭದಲ್ಲಿ ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಉತ್ಥ್ಯಾರು ಶಾಸನವನ್ನು ಇಲ್ಲಿ ಪ್ರಸ್ತಾಪಿಸಬಹುದು ಊಮಡಿ ಎಂಬಲ್ಲಿ ಬೀರನೊಳಂಬನೊಡನೆ ಕದನವೊಂದರಲ್ಲಿ ತೊಡಗಿದ್ದ ನೀತಿಮಾರ್ಗವೆಮ್ಮಡಿಯ ಉಲ್ಲೇಖ ಇದರಲ್ಲಿದೆ ಕಾಲನಿರ್ದೇಶವಿಲ್ಲದ ಈ ಶಾಸನ ೯ನೆಯ ಶತಮಾನದ ಪೂರ್ವಾರ್ಧಕ್ಕೆ ಸೇರಿದ್ದು ಉಕ್ತನಾದ ನೀತಿಮಾರ್ಗವೆಮ್ಮಡಿಯು ನೀತಿಮಾರ್ಗ ಎಱೆಯಪ್ಪನಾಗಿರಬಹುದೆಂದು ಗುರುತಿಸಲಾಗಿದೆ[1] ನಮ್ಮ ಮೇಲ್ಕಂಡ ಶಾಸನದ ಎಱೆಹವೆಮ್ಮಡಿಯು ೮೮೩ ರಿಂದ ೯೨೦ರ ವರೆಗೆ ಆಳಿದ ಈ ಅರಸನೇ ಆಗಿರಬಹುದಾದ ಸಾಧ್ಯತೆ ಇದೆ ಇದು ನಿಜವಾದಲ್ಲಿ ಶಾಸನದಕಾಲ ಸು ಕ್ರಿ ಶ ೯೧೨-೧೩ ಆಗುತ್ತದೆ

ಹೆ ಕೋ ೨೩ನೆಯ ಶಾಸನವು ಕುತೂಹಲಕಾರಿಯಾಗಿದೆ ಅದು ಎಱೆಯಪ್ಪನ ಮರಣವನ್ನು ಕುರಿತು ಹೇಳುವಷ್ಟಕ್ಕೇ ನಿಲ್ಲದೆ ಅದರ ರಾಜಕೀಯ ಪರಿಣಾಮಗಳನ್ನೂ ನಮೂದಿಸಿದೆ ಎಱೆಯಪ್ಪನ ಮರಣಾನಂತರ ಆತನ ರಾಜ್ಯ ಹಾಗೂ ಕೋಶದಲ್ಲಿ ಅರ್ಧಭಾಗವನ್ನು ಕಿರಿಯ ರಾಚಮಲ್ಲನನ್ನು ಬಲಾತ್ಕರಿಸಿ ಪಡೆಯಬಹುದೆಂಬ ನಂಬಿಕೆಯಿಂದ ಭುವನಾದಿತ್ಯನು ಬಯಲ್ನಾಡಿಗೆ ಆಗಮಿಸಿದನು (ಮನ್ನೆಬೇಡಿದೊಳರೆ ನೆಲನುಂ ಭಂಡಾರವುಮಂ ಕೊಟ್ಟಾನೆಂದು) ಆದರೆ ಐವರು ಸಾಮಂತರು ಮತ್ತು ಪೆರ್ಗಡೆಗಳು ಬಯಲ್ನಾಡನ್ನು ರಾಚಮಲ್ಲನ ಹೊರತು ಬೇರೆ ಯಾರೊಬ್ಬರೂ ಆಳಲು ಒಪ್ಪುವುದಿಲ್ಲವೆಂದು ಹೇಳಿ ಭುವನಾದಿತ್ಯನನ್ನು ವಿರೋಧಿಸಿದರು ತತ್ಫಲವಾಗಿ ಮಾಗುನ್ನಿಯಲ್ಲಿ ನಡೆದ ಕದನದಲ್ಲಿ ನಿನ್ನಿಯ ಕೊರನ್ನಿಯರಸರ ನಾಲ್ವರು ಮಕ್ಕಳೂ ಕಾದಿ ಸತ್ತರು ಶಾಸನೋಕ್ತ ಎಱೆಯಪ್ಪನು ನೀತಿಮಾರ್ಗ ಎಱೆಗಂಗನಾಗಿದ್ದು, ಆತನಿಗೆ ನರಸಿಂಹ, ಮೂರನೆಯ ರಾಚಮಲ್ಲ ಮತ್ತು ಇಮ್ಮಡಿ ಬೂತುಗ ಎಂಬ ಮೂವರು ಮಕ್ಕಳಿದ್ದರು ಈ ಮೂವರಲ್ಲಿ ಮೊದಲನೆಯವನು ಕೆಲವುಕಾಲ ಆಳಿದ ನಂತರ ಮೂರನೆಯ ರಾಚಮಲ್ಲನು ಪಟ್ಟಕ್ಕೆ ಬಂದನು ಆತನ ಕಿರಿಯ ಸಹೋದರನಾದ ಬೂತುಗನು ರಾಚಮಲ್ಲನನ್ನು ನಿವಾರಿಸಿ ಪಟ್ಟಕ್ಕೆ ಬರಲು ಬಯಸಿದನು ಅದಕ್ಕಾಗಿ ರಾಷ್ಟ್ರ

---

[1] *A R S I E* 1918, pt II para 20, p 140 (No 763 of 1917)

ಕೂಟ ಮೂರನೆಯ ಕೃಷ್ಣನ ಸಹಾಯ ಪಡೆದು ಯುದ್ಧದಲ್ಲಿ ರಾಚಮಲ್ಲನನ್ನು ಕೊಂದು ತನ್ನ ಇಚ್ಛೆಯನ್ನು ನೆರವೇರಿಸಿಕೊಂಡನೆಂಬುದು ತಿಳಿದ ವಿಷಯವೇ ಇದಕ್ಕೂ ಹಿಂದಿನ ಘಟನೆಯನ್ನು ನಮ್ಮ ಈ ಶಾಸನ ತಿಳಿಸುತ್ತದೆ ಬೂತುಗನ(?) ಪರವಾಗಿದ್ದ ಅಧಿಕಾರಿಯಾದ ಭುವನಾದಿತ್ಯನು ರಾಚಮಲ್ಲನ ಬಳಿ ಬಂದು ರಾಜ್ಯದಲ್ಲಿ ಪಾಲನ್ನು ಕೇಳಿದನು ಆದರೆ ಸಾಮಂತರು ಮತ್ತು ಪೆರ್ಗಡೆಗಳು ರಾಚಮಲ್ಲನ ಪರ ವಹಿಸಲಾಗಿ ಅಂತಃಕಲಹ ಪ್ರಾರಂಭವಾಯಿತು ರೈಸ್‌ರವರು ಈ ಶಾಸನವನ್ನು ಅರ್ಥವಿಸಿರುವ ಬಗೆ ಬೇರೆ ರೀತಿಯದಾಗಿದೆ ಅಧಿಕಾರಿಯು ರಾಚಮಲ್ಲನನ್ನು "ರಾಜ್ಯ ಕೋಶಗಳನ್ನು ಪರಸ್ಪರನಾಗಿ ಹಂಚಿಕೊಳ್ಳಲು ಮಣ್ಣೆಯ ಅರಮನೆಗೆ ಬರಲು ಆಹ್ವಾನಿಸಿದನು" ಎಂದು ಅವರು ಅರ್ಥೈಸಿದ್ದಾರೆ ಈ ಬಗೆಯ ಅರ್ಥವಿವರಣೆ ಸರಿಯೆಂದು ಕಂಡುಬರುವುದಿಲ್ಲ

ಗು ಪೇ ೨೯ನೆಯ ಶಾಸನವು ಸುಮಾರು ೧೦ನೆಯ ಶತಮಾನಕ್ಕೆ ಸೇರಿದುದಾಗಿದೆ ಅದು ಚಾವುಣ್ಡ ಪೆರ್ಮಾನಡಿಯ ಪಟ್ಟಕ್ಕೆ ಬಂದ ೭ನೆಯ ವರ್ಷಕ್ಕೆ ಸಂಬಂಧಿಸಿದೆ ಈ ಚಾವುಣ್ಡನು ಯಾರು ಎಂಬುದನ್ನು ಗುರುತಿಸಲು ಸಾಧ್ಯವಾಗಿಲ್ಲ ಈತನು ಎ ಕ III ಟಿ ನರಸೀಪುರ ೭೯ನೆಯ ಶಾಸನದಲ್ಲಿ ನಮೂದಿಸಲಾದ ಚಾವುಣ್ಡಯ್ಯನಿರಬಹುದೆಂದು ಊಹಿಸಲಾಗಿದೆ ಆದರೆ, ಯಾವ ಆಧಾರದ ಮೇಲೆ ಈ ಊಹೆ ಮಾಡಲಾಗಿದೆ ಎಂಬುದು ಸ್ಪಷ್ಟವಾಗಿಲ್ಲ ಈ ಶಾಸನವನ್ನು ಸುಮಾರು ಕ್ರಿ ಶ ೯೮೦ಕ್ಕೆ ಸೇರಿಸಲಾಗಿದ

ಗು ಪೇ ೪೮ನೆಯ ಬೆಳಚಲವಾಡಿಯ ಶಾಸನದ ಕಾಲ ಶಕವರ್ಷ ೯೩೫ ಇದು ನೀತಿಮಾರ್ಗ ಪೆರ್ಮಾನಡಿಯ ಆಳ್ವಿಕೆಯ ೩೭ನೆಯ ವರ್ಷಕ್ಕೆ ಸರಿಯಾದುದೆಂದು ಹೇಳಿದ ಶಕವರ್ಷ ತಪ್ಪಾಗಿದ್ದು, ಅದು ೯೩೨ ಇರಬೇಕೆಂದು ಡಾ ಎಂ ಎಚ್ ಕೃಷ್ಣರವರು ಸೂಚಿಸಿ, ಹೀಗಾದಲ್ಲಿ ತೇದಿಯ ಇತರ ವಿವರಗಳು–ಉತ್ತರಾಯಣ ಸಂಕ್ರಾಂತಿ ಮತ್ತು ಭಾನುವಾರ–ಕ್ರಿ ಶ ೧೦೧೦ನೆಯ ಡಿಸೆಂಬರ್ ೨೪ಕ್ಕೆ ಸರಿಹೊಂದುತ್ತದೆ ಎಂದಿದ್ದಾರೆ ಶಾಸನದಲ್ಲಿ ಇದು ನೀತಿಮಾರ್ಗನ ಆಳಿಕೆಯ ೩೭ನೆಯ ವರ್ಷವೆಂದಿರುವುದರಿಂದ ಈತನ ಆಳಿಕೆಯ ಮೊದಲವರ್ಷವು ಕ್ರಿ ಶ ೯೭೪ ಆಗುತ್ತದೆ ಈ ಕಾಲಕ್ಕೆ ಇಮ್ಮಡಿಮಾರಸಿಂಹನು ಮೃತಿಹೊಂದಿದ್ದು ಮಗನಾದ ನಾಲ್ಕನೆಯ ರಾಚಮಲ್ಲ ಪಟ್ಟಕ್ಕೆ ಬಂದಿದ್ದ ಇದನ್ನು ಒಪ್ಪಿಕೊಂಡರೆ ಇದುವರೆಗೆ ತಿಳಿದಂತೆ ಇದು ರಾಚಮಲ್ಲನ ಆಳಿಕೆಯ ಈಚಿನ ಕಾಲವಾಗುತ್ತದೆ ಆದರೆ ರಕ್ಕಸಗಂಗನ ತರುವಾಯ ನಾಲ್ಕನೆಯ ರಾಚಮಲ್ಲನ ಕಿರಿಯ ಸಹೋದರನಾದ ಮೂರನೆಯ ನೀತಿಮಾರ್ಗನು ಆಳಿದನೆಂದು ಹೇಳಿ ರೈಸ್‌ರವರು ಕ್ರಿ ಶ ೯೮೯, ೯೯೨ ಮತ್ತು ೯೯೯ನೆಯ ವರ್ಷಗಳ ಶಾಸನಗಳು ಅವನಿಗೆ ಸೇರಿದ್ದೆಂದಿದ್ದಾರೆ ರಕ್ಕಸಗಂಗನಿಗೂ ನೀತಿಮಾರ್ಗನಿಗೂ ಇದ್ದ ಸಂಬಂಧವನ್ನು ವ್ಯಕ್ತಪಡಿಸಿಲ್ಲ ಇದನ್ನು ಡಾ ಕೃಷ್ಣರವರು ಒಪ್ಪಿರುವಂತೆ ಕಂಡುಬಂದಿದೆ ಎಂತಲೇ ಅವರು ಶಾಸನೋಕ್ತ ನೀತಿಮಾರ್ಗನು ಮೂರನೆಯ ನೀತಿಮಾರ್ಗನೆಂದು ಗುರುತಿಸಿದಂತೆ ತೋರುತ್ತದೆ ಆದರೆ ನಮ್ಮ ಶಾಸನವು ಶಕವರ್ಷ ಹಾಗೂ ಆಳಿಕೆಯ ವರ್ಷಗಳೆರಡನ್ನೂ ಉಲ್ಲೇಖಿಸಿರುವುದರಿಂದ ಶಾಸನದಲ್ಲಿ ಉಕ್ತವಾಗಿರುವ ನೀತಿಮಾರ್ಗನನ್ನು ನಾಲ್ಕನೆಯ ರಾಚಮಲ್ಲನೆಂದು ಗುರುತಿಸಬಹುದಾಗಿದೆ

## ಬಯಲ್ನಾಡಿನ ಕದಂಬರು

ಹೆಗ್ಗಡದೇವನಕೋಟೆ ತಾಲ್ಲೂಕಿನ ಶಾಸನಗಳ ಆಧಾರದ ಮೇಲೆ ರೈಸ್‌ರವರು ಬಯಲ್ನಾಡಿನ ಕದಂಬರ ಸಮೀಕ್ಷೆಯನ್ನು ನೀಡಿ ಅವರ ಹೆಸರುಗಳನ್ನು ಈ ಕೆಳಕಂಡಂತೆ ಕೊಟ್ಟಿದ್ದಾರೆ ರವಿಯಮ್ಮರಸ (ರವಿವರ್ಮ?)–೯೯೮, ಕನ್ದವಮ್ಮ(ಸ್ಕನ್ದವರ್ಮ)–೧೦೭೯, ಸಿವ ೧೦೮೩, ಕಂಠೀರವ–೧೦೯೦, ಇರವಿಚಲ್ಲಮ್ಮ–೧೧೦೭, ಮುಕ್ಕಣ್ಣ–೧೧೩೮ ಆದರೆ ಇವು ಶಾಸನಗಳನ್ನು ತಪ್ಪಾಗಿ ಓದಿ ಅವುಗಳಿಗೆ ತಪ್ಪಾದ ಅರ್ಥವಿವರಣೆಯನ್ನು ಕೊಟ್ಟಿರುವುದರ ಫಲ ಸಿವ , ಕಂಠೀರವ ಅಥವಾ ಮುಕ್ಕಣ್ಣ ಎಂಬ ಹೆಸರನ್ನುಳ್ಳ ಯಾವ ಮಾಂಡಲಿಕನೂ ಈ ಮನೆತನದಲ್ಲಿರಲಿಲ್ಲ ಸೋಗಳ್ಳಿಯ ಶಾಸನದ (ಹೆ ಕೋ ೧೩೭) ಕಾಲ ಕ್ರಿ ಶ ೧೦೮೩ ಎಂದು ಹೇಳಲಾಗಿದೆ ಶಾಸನದ ಲಿಪ್ಯಂತರ ಪಾಠದಲ್ಲಿ ಕಾಲದ ಭಾಗವನ್ನು 'ಶಕವರಿಷ ಸಾವಿ[ರ]ದ ಅಯ್ದನೆಯ' ಎಂದು ಓದಲಾಗಿದ್ದು, ಆದ್ದರಿಂದ ಅದು ಕ್ರಿ ಶ ೧೦೮೩ಕ್ಕೆ ಸಮಾನವಾದುದೆಂದು ಗ್ರಹಿಸಲಾಗಿದೆ ಆದರೆ ಕನ್ನಡದಲ್ಲಿರುವ ಪಾಠದಲ್ಲಿ 'ಶಕವರಿಷಸಂದಅಯ್ದನೆಯಾ' ಎಂದಿದ್ದು ಶಾಸನದ ಮೂಲಪ್ರತಿಯೊಂದಿಗೆ ಹೋಲಿಸಿದಾಗ ಈ ಪಾಠ ಸರಿಯಾಗಿರುವುದೆಂದು ಕಂಡುಬಂದಿದೆ ಮುಂದುವರಿದು 'ಸಿವ ನಕಟಾರಲದನ್ದು' ಎಂದು ರೈಸ್‌ರವರು ಓದಿರುವುದನ್ನು ನಾವು 'ಸವದಿವ್ವನ ಕಡಾರಲದನ್ದು' ಎಂದು

ಓದಿದ್ದೇವೆ  ಆದ್ದರಿಂದ ನಾಯಕನ ಹೆಸರು ಸಿವ ಎಂದಾಗಲಾರದು  ಹೆ ಕೋ ೧೦೮ನೆಯ ಶಾಸನದ ೩ನೆಯ ಪಂಕ್ತಿಯನ್ನು ಮುನ್ನಿನ ಮುದ್ರಣದಲ್ಲಿ 'ಚಿದ್ದಚಿದುಕಂಠೀರವ' ಎಂದು ಓದಲಾಗಿದೆ  ಆದರೆ ಅದು 'ವಿದುವಿಷ್ಟ ಕಂಠೀರವ' ವಾಗಿದ್ದು, ಕಂಠೀರವ ಎಂಬುದು ಒಂದು ಬಿರುದಾಗುತ್ತದೆಯೇ ಹೊರತು ಅದನ್ನು ಒಬ್ಬನ ಹೆಸರೆಂದು ತೆಗೆದುಕೊಳ್ಳಲು ಬರುವುದಿಲ್ಲ  ಹೆ ಕೋ ೧೧೦ನೆಯ ಶಾಸನದಲ್ಲಿ ರೈಸ್‌ರವರು ಕದಂಬ ಕಣ್ಠೀರ ಎಂಬ ಹೆಸರನ್ನು ಓದಿದ್ದು ಆ ಹೆಸರು ಇದೇ ಕಂಠೀರವನ ಹೆಸರೆಂದು ಭಾವಿಸಿದ್ದಾರೆ  ಆದರೆ 'ಕದಂಬ ಕಣ್ಠೀರ' ಎಂಬುದು ಒಂದು ಬಿರುದು  ಶಾಸನದಲ್ಲಿನ ಪಂಕ್ತಿಗಳಲ್ಲಿ ವ್ಯತ್ಯಾಸಗಳಾಗಿದ್ದು ಶಾಸನ ಪಾಠವನ್ನು ಸರಿಯಾಗಿ ಓದಲಾಗಿಲ್ಲ  ಅದರಲ್ಲಿ ಆಗ ಬಯಲ್ನಾಡನ್ನು ಆಳುತ್ತಿದ್ದ ಚಾಗಿಯ ಉಲ್ಲೇಖವಿದೆ  ಅದರಂತೆಯೇ ರೈಸ್‌ರವರು ಮುಕ್ಕಣ್ಣ ಕದಂಬನ ಹೆಸರನ್ನು ಹೆ ಕೋ ೧೧೭ರ ಶಾಸನದಲ್ಲಿ ಓದಿದ್ದಾರೆ  ಅದು ಕೇವಲ ಒಂದು ಬಿರುದಾಗಿದ್ದು ನಾಯಕನ ಹೆಸರು ಸವೆದಿದೆ  ಹೆ ಕೋ ೧೨೩ನೆಯ ಶಾಸನದ ಕಾಲ ಕ್ರಿ ಶ ೧೦೭೮ ಎಂಬುದು ಸರಿ  ರೈಸ್‌ರವರ ಅಭಿಪ್ರಾಯದಂತೆ ಅದರಲ್ಲಿ ಉಕ್ತನಾದ ಮಾಂಡಲಿಕನ ಹೆಸರು ಕಂದವರ್ಮ ಎಂದು ಹೇಳಿದೆ  ಆದರೆ ಮುನ್ನಿನ ಮುದ್ರಣದಲ್ಲಿನ ಕನ್ನಡದ ಶಾಸನ ಪಾಠದಲ್ಲಿ ಆ ಹೆಸರಿಲ್ಲ  ಅದು ಈಕರವರ್ಮ (?) ಎಂಬ ಹೆಸರಾಗಿರಬಹುದೆಂದು ತೋರುತ್ತದೆ  ಈ ಶಾಸನವನ್ನು ಆಧರಿಸಿ ರೈಸ್‌ರವರು "ಯುಗ್ಮ ಬಯಲ್ನಾಡು" (ಎರಡು ಬಯಲ್ನಾಡು) ಗಳನ್ನು ಪತ್ತೆಹಚ್ಚಿದ್ದಾರೆ  ಆದರೆ ಇದು ಶಾಸನ ಪಾಠವನ್ನು ಓದುವುದರಲ್ಲಿ ಉಂಟಾದ ತಪ್ಪಿನ ಫಲ  ಶಾಸನದ ೮-೯ನೆಯ ಸಾಲುಗಳನ್ನು ಅವರು "ಅಸತೀನೂತಲತಾಂಗಧೀ  ಸಯುಗ್ಮಬಯಲ್ನಾಡನಂ" ಎಂದು ಓದಿ 'ಯುಗ್ಮ' ಎಂಬುದು ಬಯಲ್ನಾಡಿಗೆ ಅನ್ವಯಿಸುವುದೆಂದು ಭಾವಿಸಿದರು  ವಾಸ್ತವವಾಗಿ ನಾವು ಈಗ ಕೊಟ್ಟಿರುವ ಶಾಸನಪಾಠ "ಅಸತೀನೂತಲತಾಂಗದಿವ್ಯ ದೃಗಯುಗ್ಮ ಬಯಲ್ನಾಡನಂ" ಎಂದಿದ್ದು ಇಲ್ಲಿ 'ಯುಗ್ಮ' ಎಂಬುದು 'ದೃಗ' ಎಂಬ ಪದಕ್ಕೆ ಅನ್ವಯಿಸುವುದೇ ಹೊರತು ಎರಡು ಬಯಲ್ನಾಡುಗಳಿರುವ ಸಂಭವವೇ ಇಲ್ಲ

ಈ ಕೆಳಗೆ ಕಾಣಿಸಿದ ಬಯಲ್ನಾಡಿನ ಕದಂಬರ ಹೆಸರುಗಳು ಮಾತ್ರ ಪ್ರಸ್ತುತ ಸಂಪುಟದಲ್ಲಿ ಲಭ್ಯವಿದೆ  ಚಾಗಿ, ಉರವಿಯಮ್ಮರಸ (?) ಕ್ರಿ ಶ (೯೯೮-೯೯)  ಈಕರವರ್ಮ (ಕ್ರಿ ಶ ೧೦೭೮), ಮತ್ತು ಇರವಿಚಲ್ಲಮ್ಮ (ಕ್ರಿ ಶ ೧೧೦೭)  ಲಿಪಿಯ ಆಧಾರದಿಂದ ಹೆ ಕೋ ೧೧೦ನೆಯ ಶಾಸನ ೧೦ನೆಯ ಶತಮಾನಕ್ಕೆ ಸೇರಿದುದೆನ್ನಬಹುದು  ಆದ್ದರಿಂದ ಇದರಲ್ಲಿ ಉಕ್ತನಾಗಿರುವ ಚಾಗಿಯು ಮೇಲೆ ಹೇಳಿದ ನಾಲ್ವರಲ್ಲಿ ಮೊದಲಿನವನೆಂದು ಪರಿಗಣಿಸಬಹುದು  ಈತನು ಮಂಜರಾಬಾದಿನ ಶಾಸನದಲ್ಲಿ[1] ಬರುವ ಚಾಗಿಮಹಾರಾಜನಿಗಿಂತ ಭಿನ್ನನಾಗಿರಬಹುದೆಂದು ತೋರುತ್ತದೆ  ಶಕವರ್ಷ ೧೦೧೭ಕ್ಕೆ ಸಮನಾದ ಕ್ರಿ ಶ ೧೦೯೫ರ ಆ ಶಾಸನವು ದಯಸಿಂಹನೃಪನಿಗೆ ಸಂಬಂಧಿಸಿದ್ದು, ಆತನ ಹಿರಿಯ ಸಹೋದರ ಮತ್ತು ತಾತ–ಇಬ್ಬರಿಗೂ ಚಾಗಿಮಹಾರಾಜ ಎಂಬ ಹೆಸರಿದೆ  ದಯಸಿಂಹ ಮತ್ತು ಆತನ ಪೂರ್ವಿಕರು ಒಬ್ಬೊಬ್ಬರೂ ೨೫ ವರ್ಷಗಳ ಕಾಲ ಆಳಿದರೆಂದು ಭಾವಿಸಿದಲ್ಲಿ ಮೊದಲನೆಯ ಚಾಗಿಮಹಾರಾಜನು ೧೧ನೆಯ ಶತಮಾನದ ಮಧ್ಯದಲ್ಲಿ ಆಳಿರಬೇಕು  ಆದರೆ ಪ್ರಸ್ತುತ ಚರ್ಚೆಗೊಳಗಾದ ಬಯಲ್ನಾಡಿನ ಕದಂಬರ ಚಾಗಿಯು ೧೦ನೆಯ ಶತಮಾನದಲ್ಲಿ ಅಧಿಕಾರದಲ್ಲಿದ್ದನು

## ರಾಷ್ಟ್ರಕೂಟರು

ಈ ಸಂಪುಟದಲ್ಲಿ ರಾಷ್ಟ್ರಕೂಟರ ಅರಸನಾದ ಧ್ರುವನ ಮಗನಾದ ಕಂಬಯ್ಯನ ಎರಡು ಶಾಸನಗಳಿವೆ  ಆತನ ಬದನಗುಪ್ಪೆಯ ತಾಮ್ರಶಾಸನ (ನಂ ಗೂ ೨೭೮)ದ ಕಾಲ ಕ್ರಿ ಶ ೮೦೮  ಇದರಲ್ಲಿ ಆತನ ತಮ್ಮನಾದ ಮುಮ್ಮಡಿ ಗೋವಿಂದ (ಗೋವಿಂದರಾಜ)ನ ಪರಾಕ್ರಮವನ್ನು ವರ್ಣಿಸಲಾಗಿದ್ದು, ಕಂಬಯ್ಯನು ಸ್ವತಃ ತನ್ನನ್ನು ಶ್ರೀಮತ್‌ಧಾರಾವರ್ಷ ಪಾದಾನುಧ್ಯಾತನೆಂದು ಹೇಳಿಕೊಂಡಿದ್ದಾನೆ  ಪುನ್ನಾಡು-ಎಡೆನಾಡನ್ನು ತಾನು ಆಳುತ್ತಿದ್ದು ವಿಜಯಯಾತ್ರೆಯ ಸಂದರ್ಭದಲ್ಲಿ ತಲವನನಗರದಲ್ಲಿ ಬೀಡುಬಿಟ್ಟಿದ್ದಾಗ ಬದನಗುಪ್ಪೆ ಗ್ರಾಮವನ್ನು ದಾನಮಾಡಿದನೆಂದು ಹೇಳಲಾಗಿದೆ  ಈ ಶಾಸನಕಾಲದ ವೇಳೆಗೆ ಕಂಬಯ್ಯನು ತನ್ನ ಸಹೋದರನೊಂದಿಗೆ ಸಂಧಿಮಾಡಿಕೊಂಡು ಪ್ರಾಂತಾಧಿಕಾರಿಯಾಗಿದ್ದನೆಂಬುದು

[1] ಎ ಕ V, Mj 18

ಕೂಟ ಮೂರನೆಯ ಕೃಷ್ಣನ ಸಹಾಯ ಪಡೆದು ಯುದ್ಧದಲ್ಲಿ ರಾಚಮಲ್ಲನನ್ನು ಕೊಂದು ತನ್ನ ಇಚ್ಛೆಯನ್ನು ನೆರವೇರಿಸಿ ಕೊಂಡನೆಂಬುದು ತಿಳಿದ ವಿಷಯವೇ ಇದಕ್ಕೂ ಹಿಂದಿನ ಘಟನೆಯನ್ನು ನಮ್ಮ ಈ ಶಾಸನ ತಿಳಿಸುತ್ತದೆ ಬೂತುಗನ(?) ಪರವಾಗಿದ್ದ ಅಧಿಕಾರಿಯಾದ ಭುವನಾದಿತ್ಯನು ರಾಚಮಲ್ಲನ ಬಳಿ ಬಂದು ರಾಜ್ಯದಲ್ಲಿ ಪಾಲನ್ನು ಕೇಳಿದನು ಆದರೆ ಸಾಮಂತರು ಮತ್ತು ಪೆರ್ಗಡೆಗಳು ರಾಚಮಲ್ಲನ ಪರ ವಹಿಸಲಾಗಿ ಅಂತಃಕಲಹ ಪ್ರಾರಂಭವಾಯಿತು ರೈಸ್‌ರವರು ಈ ಶಾಸನವನ್ನು ಅರ್ಥವಿಸಿರುವ ಬಗೆ ಬೇರೆ ರೀತಿಯದಾಗಿದೆ ಅಧಿಕಾರಿಯು ರಾಚಮಲ್ಲನನ್ನು "ರಾಜ್ಯ ಕೋಶಗಳನ್ನು ಪರಸ್ಪರವಾಗಿ ಹಂಚಿಕೊಳ್ಳಲು ಮಣ್ಣಿಯ ಅರಮನೆಗೆ ಬರಲು ಆಹ್ವಾನಿಸಿದನು" ಎಂದು ಅವರು ಅರ್ಥೈಸಿದ್ದಾರೆ ಈ ಬಗೆಯ ಅರ್ಥವಿವರಣೆ ಸರಿಯೆಂದು ಕಂಡುಬರುವುದಿಲ್ಲ

ಗು ವೇ ೨೯ನೆಯ ಶಾಸನವು ಸುಮಾರು ೧೦ನೆಯ ಶತಮಾನಕ್ಕೆ ಸೇರಿದುದಾಗಿದೆ ಅದು ಚಾವುಣ್ಡ ಪೆರ್ಮಾನಡಿಯ ಪಟ್ಟಕ್ಕೆ ಬಂದ ೭ನೆಯ ವರ್ಷಕ್ಕೆ ಸಂಬಂಧಿಸಿದೆ ಈ ಚಾವುಣ್ಡನು ಯಾರು ಎಂಬುದನ್ನು ಗುರುತಿಸಲು ಸಾಧ್ಯವಾಗಿಲ್ಲ ಈತನು ಎ ಕ III ಟಿ ನರಸೀಪುರ ೭೯ನೆಯ ಶಾಸನದಲ್ಲಿ ನಮೂದಿಸಲಾದ ಚಾವುಣ್ಡಯ್ಯನಿರಬಹುದೆಂದು ಊಹಿಸಲಾಗಿದೆ ಆದರೆ, ಯಾವ ಆಧಾರದ ಮೇಲೆ ಈ ಊಹೆ ಮಾಡಲಾಗಿದೆ ಎಂಬುದು ಸ್ಪಷ್ಟವಾಗಿಲ್ಲ ಈ ಶಾಸನವನ್ನು ಸುಮಾರು ಕ್ರಿ ಶ ೯೮೦ಕ್ಕೆ ಸೇರಿಸಲಾಗಿದೆ

ಗು ಪೇ ೪೮ನೆಯ ಬೆಳಚಲವಾಡಿಯ ಶಾಸನದ ಕಾಲ ಶಕವರ್ಷ ೯೩೫ ಇದು ನೀತಿಮಾರ್ಗ ಪೆರ್ಮಾನಡಿಯ ಆಳ್ವಿಕೆಯ ೩೭ನೆಯ ವರ್ಷಕ್ಕೆ ಸರಿಯಾದುದೆಂದು ಹೇಳಿದೆ ಶಕವರ್ಷ ತಪ್ಪಾಗಿದ್ದು, ಅದು ೯೩೨ ಇರಬೇಕೆಂದು ಡಾ ಎಂ ಎಚ್ ಕೃಷ್ಣರವರು ಸೂಚಿಸಿ, ಹೀಗಾದಲ್ಲಿ ತೇದಿಯ ಇತರ ವಿವರಗಳು–ಉತ್ತರಾಯಣ ಸಂಕ್ರಾಂತಿ ಮತ್ತು ಭಾನುವಾರ–ಕ್ರಿ ಶ ೧೦೧೦ನೆಯ ಡಿಸೆಂಬರ್ ೨೪ಕ್ಕೆ ಸರಿಹೊಂದುತ್ತದೆ ಎಂದಿದ್ದಾರೆ ಶಾಸನದಲ್ಲಿ ಇದು ನೀತಿಮಾರ್ಗನ ಆಳಿಕೆಯ ೩೭ನೆಯ ವರ್ಷವೆಂದಿರುವುದರಿಂದ ಈತನ ಆಳಿಕೆಯ ಮೊದಲವರ್ಷವು ಕ್ರಿ ಶ ೯೭೪ ಆಗುತ್ತದೆ ಈ ಕಾಲಕ್ಕೆ ಇಮ್ಮಡಿಮಾರಸಿಂಹನು ಮೃತಿಹೊಂದಿದ್ದು ಮಗನಾದ ನಾಲ್ಕನೆಯ ರಾಚಮಲ್ಲ ಪಟ್ಟಕ್ಕೆ ಬಂದಿದ್ದ ಇದನ್ನು ಒಪ್ಪಿ ಕೊಂಡರೆ ಇದುವರೆಗೆ ತಿಳಿದಂತೆ ಇದು ರಾಚಮಲ್ಲನ ಆಳಿಕೆಯ ಈಚಿನ ಕಾಲವಾಗುತ್ತದೆ ಆದರೆ ರಕ್ಕಸಗಂಗನ ತರುವಾಯ ನಾಲ್ಕನೆಯ ರಾಚಮಲ್ಲನ ಕಿರಿಯ ಸಹೋದರನಾದ ಮೂರನೆಯ ನೀತಿಮಾರ್ಗನು ಆಳಿದನೆಂದು ಹೇಳಿ ರೈಸ್‌ರವರು ಕ್ರಿ ಶ ೯೮೯, ೯೯೨ ಮತ್ತು ೯೯೯ನೆಯ ವರ್ಷಗಳ ಶಾಸನಗಳು ಅವನಿಗೆ ಸೇರಿದ್ದೆಂದಿದ್ದಾರೆ ರಕ್ಕಸಗಂಗನಿಗೂ ನೀತಿಮಾರ್ಗನಿಗೂ ಇದ್ದ ಸಂಬಂಧವನ್ನು ವ್ಯಕ್ತಪಡಿಸಿಲ್ಲ ಇದನ್ನು ಡಾ ಕೃಷ್ಣರವರು ಒಪ್ಪಿರುವಂತೆ ಕಂಡುಬಂದಿದೆ ಎಂತಲೇ ಅವರು ಶಾಸನೋಕ್ತ ನೀತಿಮಾರ್ಗನು ಮೂರನೆಯ ನೀತಿಮಾರ್ಗನೆಂದು ಗುರುತಿಸಿದಂತೆ ತೋರುತ್ತದೆ ಆದರೆ ನಮ್ಮ ಶಾಸನವು ಶಕವರ್ಷ ಹಾಗೂ ಆಳಿಕೆಯ ವರ್ಷಗಳೆರಡನ್ನೂ ಉಲ್ಲೇಖಿಸಿರುವುದರಿಂದ ಶಾಸನದಲ್ಲಿ ಉಕ್ತವಾಗಿರುವ ನೀತಿಮಾರ್ಗನನ್ನು ನಾಲ್ಕನೆಯ ರಾಚಮಲ್ಲನೆಂದು ಗುರುತಿಸಬಹುದಾಗಿದೆ

## ಬಯಲ್ನಾಡಿನ ಕದಂಬರು

ಹೆಗ್ಗಡದೇವನಕೋಟೆ ತಾಲ್ಲೂಕಿನ ಶಾಸನಗಳ ಆಧಾರದ ಮೇಲೆ ರೈಸ್‌ರವರು ಬಯಲ್ನಾಡಿನ ಕದಂಬರ ಸಮೀಕ್ಷೆಯನ್ನು ನೀಡಿ ಅವರ ಹೆಸರುಗಳನ್ನು ಈ ಕೆಳಕಂಡಂತೆ ಕೊಟ್ಟಿದ್ದಾರೆ ರವಿಯಮ್ಮರಸ (ರವಿವರ್ಮ?)–೯೯೮, ಕನ್ದವಮ್ಮ(ಸ್ಕನ್ದವರ್ಮ)–೧೦೭೯, ಸಿವ ೧೦೮೩, ಕಂಠೀರವ–೧೦೯೦, ಇರವಿಚಲ್ಲಮ್ಮ–೧೧೦೭, ಮುಕ್ಕಣ್ಣ–೧೧೩೮. ಆದರೆ ಇವು ಶಾಸನಗಳನ್ನು ತಪ್ಪಾಗಿ ಓದಿ ಅವುಗಳಿಗೆ ತಪ್ಪಾದ ಅರ್ಥವಿವರಣೆಯನ್ನು ಕೊಟ್ಟಿರುವುದರ ಫಲ ಸಿವ , ಕಂಠೀರವ ಅಥವಾ ಮುಕ್ಕಣ್ಣ ಎಂಬ ಹೆಸರನ್ನುಳ್ಳ ಯಾವ ಮಾಂಡಲಿಕನೂ ಈ ಮನೆತನದಲ್ಲಿರಲಿಲ್ಲ ಸೋಗಳ್ಳಿಯ ಶಾಸನದ (ಹೆ ಕೋ ೧೩೭) ಕಾಲ ಕ್ರಿ ಶ ೧೦೮೩ ಎಂದು ಹೇಳಲಾಗಿದೆ ಶಾಸನದ ಲಿಪ್ಯಂತರ ಪಾಠದಲ್ಲಿ ಕಾಲದ ಭಾಗವನ್ನು 'ಶಕವರಿಷ ಸಾವಿ[ರ]ದ ಅಯ್ದನೆಯ' ಎಂದು ಓದಲಾಗಿದ್ದು, ಆದ್ದರಿಂದ ಅದು ಕ್ರಿ ಶ ೧೦೮೩ಕ್ಕೆ ಸಮಾನವಾದುದೆಂದು ಗ್ರಹಿಸಲಾಗಿದೆ ಆದರೆ ಕನ್ನಡದಲ್ಲಿರುವ ಪಾಠದಲ್ಲಿ 'ಶಕವರಿಷಸಂದಅಯ್ದನೆಯಾ' ಎಂದಿದ್ದು ಶಾಸನದ ಮೂಲಪ್ರತಿಯೊಂದಿಗೆ ಹೋಲಿಸಿದಾಗ ಈ ಪಾಠ ಸರಿಯಾಗಿರುವುದೆಂದು ಕಂಡುಬಂದಿದೆ ಮುಂದುವರಿದು 'ಸಿವ ನಕಟಾರಲದನ್ದು' ಎಂದು ರೈಸ್‌ರವರು ಓದಿರುವುದನ್ನು ನಾವು 'ಸವದಿವ್ವನ ಕಡಾರಲದನ್ದು' ಎಂದು

ಓದಿದ್ದೇವೆ ಆದ್ದರಿಂದ ನಾಯಕನ ಹೆಸರು ಸಿವ ಎಂದಾಗಲಾರದು ಹೆ ಕೋ ೧೨೮ನೆಯ ಶಾಸನದ ೨ನೆಯ ಪಂಕ್ತಿಯನ್ನು ಮುನ್ನಿನ ಮುದ್ರಣದಲ್ಲಿ 'ಚಿದ್ದಚಿದುಕಂಠೀರವ' ಎಂದು ಓದಲಾಗಿದೆ ಆದರೆ ಅದು 'ನಿದುನಿಸ್ತ್ಕಂಠೀರವ' ವಾಗಿದ್ದು, ಕಂಠೀರವ ಎಂಬುದು ಒಂದು ಬಿರುದಾಗುತ್ತದೆಯೇ ಹೊರತು ಅದನ್ನು ಒಬ್ಬನ ಹೆಸರೆಂದು ತೆಗೆದುಕೊಳ್ಳಲು ಬರುವುದಿಲ್ಲ ಹೆ ಕೋ ೧೧೦ನೆಯ ಶಾಸನದಲ್ಲಿ ರೈಸ್‌ರವರು ಕದಂಬ ಕಣ್ಠೀರ ಎಂಬ ಹೆಸರನ್ನು ಓದಿದ್ದು ಆ ಹೆಸರು ಇದೇ ಕಂಠೀರವನ ಹೆಸರೆಂದು ಭಾವಿಸಿದ್ದಾರೆ ಆದರೆ 'ಕದಂಬ ಕಣ್ಠೀರ' ಎಂಬುದು ಒಂದು ಬಿರುದು ಶಾಸನದಲ್ಲಿನ ಪಂಕ್ತಿಗಳಲ್ಲಿ ವ್ಯತ್ಯಾಸಗಳಾಗಿದ್ದು ಶಾಸನ ಪಾಠವನ್ನು ಸರಿಯಾಗಿ ಓದಲಾಗಿಲ್ಲ ಅದರಲ್ಲಿ ಆಗ ಬಯಲ್ನಾಡನ್ನು ಆಳುತ್ತಿದ್ದ ಚಾಗಿಯ ಉಲ್ಲೇಖವಿದೆ ಅದರಂತೆಯೇ ರೈಸ್‌ರವರು ಮುಕ್ಕಣ್ಣ ಕದಂಬನ ಹೆಸರನ್ನು ಹೆ ಕೋ ೧೧೭ರ ಶಾಸನದಲ್ಲಿ ಓದಿದ್ದಾರೆ ಅದು ಕೇವಲ ಒಂದು ಬಿರುದಾಗಿದ್ದು ನಾಯಕನ ಹೆಸರು ಸವೆದಿದೆ ಹೆ ಕೋ ೧೩೩ನೆಯ ಶಾಸನದ ಕಾಲ ಕ್ರಿ ಶ ೧೦೭೯ ಎಂಬುದು ಸರಿ ರೈಸ್‌ರವರ ಅಭಿಪ್ರಾಯದಂತೆ ಅದರಲ್ಲಿ ಉಕ್ತನಾದ ಮಾಂಡಲಿಕನ ಹೆಸರು ಕಂದವರ್ಮ ಎಂದು ಹೇಳಿದೆ ಆದರೆ ಮುನ್ನಿನ ಮುದ್ರಣದಲ್ಲಿನ ಕನ್ನಡದ ಶಾಸನ ಪಾಠದಲ್ಲಿ ಆ ಹೆಸರಿಲ್ಲ ಅದು ಈಕರವರ್ಮ (?) ಎಂಬ ಹೆಸರಾಗಿರಬಹುದೆಂದು ತೋರುತ್ತದೆ ಈ ಶಾಸನವನ್ನು ಆಧರಿಸಿ ರೈಸ್‌ರವರು "ಯುಗ್ಮ ಬಯಲ್ನಾಡು" (ಎರಡು ಬಯಲ್ನಾಡು) ಗಳನ್ನು ಪತ್ತೆಹಚ್ಚಿದ್ದಾರೆ ಆದರೆ ಇದು ಶಾಸನ ಪಾಠವನ್ನು ಓದುವುದರಲ್ಲಿ ಉಂಟಾದ ತಪ್ಪಿನ ಫಲ ಶಾಸನದ ೪-೫ನೆಯ ಸಾಲುಗಳನ್ನು ಅವರು "ಅಸತೀನೂತಲತಾಂಗಧೀ ನಯುಗ್ಮಬಯಲ್ನಾಡನಂ" ಎಂದು ಓದಿ 'ಯುಗ್ಮ' ಎಂಬುದು ಬಯಲ್ನಾಡಿಗೆ ಅನ್ವಯಿಸುವುದೆಂದು ಭಾವಿಸಿದರು ವಾಸ್ತವವಾಗಿ ನಾವು ಈಗ ಕೊಟ್ಟಿರುವ ಶಾಸನಪಾಠ "ಅಸತೀನೂತಲತಾಂಗದಿವ್ಯದೃಗಯುಗ್ಮ ಬಯಲ್ನಾಡನಂ" ಎಂದಿದ್ದು ಇಲ್ಲಿ 'ಯುಗ್ಮ' ಎಂಬುದು 'ದೃಗ' ಎಂಬ ಪದಕ್ಕೆ ಅನ್ವಯಿಸುವುದೇ ಹೊರತು ಎರಡು ಬಯಲ್ನಾಡುಗಳಿರುವ ಸಂಭವವೇ ಇಲ್ಲ

ಈ ಕೆಳಗೆ ಕಾಣಿಸಿದ ಬಯಲ್ನಾಡಿನ ಕದಂಬರ ಹೆಸರುಗಳು ಮಾತ್ರ ಪ್ರಸ್ತುತ ಸಂಪುಟದಲ್ಲಿ ಲಭ್ಯವಿವೆ ಚಾಗಿ, ಉರವಿಯಮ್ಮರಸ (?) ಕ್ರಿ ಶ (೯೯೮-೯೯) ಈಕರವರ್ಮ (ಕ್ರಿ ಶ ೧೦೭೯), ಮತ್ತು ಇರವಿಚಲ್ಲಮ್ಮ (ಕ್ರಿ ಶ ೧೧೦೭) ಲಿಪಿಯ ಆಧಾರದಿಂದ ಹೆ ಕೋ ೧೧೦ನೆಯ ಶಾಸನ ೧೦ನೆಯ ಶತಮಾನಕ್ಕೆ ಸೇರಿದುದೆನ್ನಬಹುದು ಆದ್ದರಿಂದ ಇದರಲ್ಲಿ ಉಕ್ತನಾಗಿರುವ ಚಾಗಿಯು ಮೇಲೆ ಹೇಳಿದ ನಾಲ್ವರಲ್ಲಿ ಮೊದಲಿನವನೆಂದು ಪರಿಗಣಿಸಬಹುದು ಈತನು ಮಂಜರಾಬಾದಿನ ಶಾಸನದಲ್ಲಿ[1] ಬರುವ ಚಾಗಿಮಹಾರಾಜನಿಗಿಂತ ಭಿನ್ನನಾಗಿರಬಹುದೆಂದು ತೋರುತ್ತದೆ ಶಕವರ್ಷ ೧೦೧೭ಕ್ಕೆ ಸಮನಾದ ಕ್ರಿ ಶ ೧೦೯೫ರ ಆ ಶಾಸನವು ದಯಸಿಂಹನೃಪನಿಗೆ ಸಂಬಂಧಿಸಿದ್ದು, ಆತನ ಹಿರಿಯ ಸಹೋದರ ಮತ್ತು ತಾತ-ಇಬ್ಬರಿಗೂ ಚಾಗಿಮಹಾರಾಜ ಎಂಬ ಹೆಸರಿದೆ ದಯಸಿಂಹ ಮತ್ತು ಆತನ ಪೂರ್ವಿಕರು ಒಬ್ಬೊಬ್ಬರೂ ೨೫ ವರ್ಷಗಳ ಕಾಲ ಆಳಿದರೆಂದು ಭಾವಿಸಿದಲ್ಲಿ ಮೊದಲನೆಯ ಚಾಗಿಮಹಾರಾಜನು ೧೧ನೆಯ ಶತಮಾನದ ಮಧ್ಯದಲ್ಲಿ ಆಳಿರಬೇಕು ಆದರೆ ಪ್ರಸ್ತುತ ಚರ್ಚೆಗೊಳಗಾದ ಬಯಲ್ನಾಡಿನ ಕದಂಬರ ಚಾಗಿಯು ೧೦ನೆಯ ಶತಮಾನದಲ್ಲಿ ಅಧಿಕಾರದಲ್ಲಿದ್ದನು

## ರಾಷ್ಟ್ರಕೂಟರು

ಈ ಸಂಪುಟದಲ್ಲಿ ರಾಷ್ಟ್ರಕೂಟರ ಅರಸನಾದ ಧ್ರುವನ ಮಗನಾದ ಕಂಬಯ್ಯನ ಎರಡು ಶಾಸನಗಳಿವೆ ಆತನ ಬದನಗುಪ್ಪೆಯ ತಾಮ್ರಶಾಸನ (ನಂ ಗೂ ೨೭೮)ದ ಕಾಲ ಕ್ರಿ ಶ ೮೦೮ ಇದರಲ್ಲಿ ಆತನ ತಮ್ಮನಾದ ಮುಮ್ಮಡಿ ಗೋವಿಂದ (ಗೋವಿಂದರಾಜ)ನ ಪರಾಕ್ರಮವನ್ನು ವರ್ಣಿಸಲಾಗಿದ್ದು, ಕಂಬಯ್ಯನು ಸ್ವತಃ ತನ್ನನ್ನು ಶ್ರೀಮತ್‌ಧಾರಾವರ್ಷ ಪಾದಾನುಧ್ಯಾತನೆಂದು ಹೇಳಿಕೊಂಡಿದ್ದಾನೆ ಪುನ್ನಾಡು-ಎಡೆನಾಡನ್ನು ತಾನು ಆಳುತ್ತಿದ್ದು ವಿಜಯಯಾತ್ರೆಯ ಸಂದರ್ಭದಲ್ಲಿ ತಲವನನಗರದಲ್ಲಿ ಬೀಡುಬಿಟ್ಟಿದ್ದಾಗ ಬದನಗುಪ್ಪೆ ಗ್ರಾಮವನ್ನು ದಾನಮಾಡಿದನೆಂದು ಹೇಳಲಾಗಿದೆ ಈ ಶಾಸನಕಾಲದ ವೇಳೆಗೆ ಕಂಬಯ್ಯನು ತನ್ನ ಸಹೋದರನೊಂದಿಗೆ ಸಂಧಿಮಾಡಿಕೊಂಡು ಪ್ರಾಂತಾಧಿಕಾರಿಯಾಗಿದ್ದನೆಂಬುದು

---

[1] ಎ ಕ V, Mj 18

ವ್ಯಕ್ತವಾಗುತ್ತದೆ  ಇದಕ್ಕೆ ಮುಂಚೆ ಈತನು ಆ ಸಹೋದರನ ವಿರುದ್ಧವಾಗಿ ದಂಗೆ ಎದ್ದು ಗಂಗರ ಶಿವಮಾರನ ನೆರವನ್ನು ಪಡೆದಿದ್ದ  ಶಾಸನದಲ್ಲಿ ಈತನ ಮಗ ಶಂಕರಗಣ್ಣನ ಉಲ್ಲೇಖವೂ ಇದೆ

ಹೆ ಕೋ ೪೬ನೆಯ ಪುಟಕೇರಿಯ ಶಾಸನವು ಭಗ್ನವಾಗಿದೆ  ಇದು ಧಾರಾವರ್ಷನ ಆಳ್ವಿಕೆಗೆ ಸಂಬಂಧಿಸಿದುದಾಗಿದೆ ಕಂಬರಸ, ಅಂದರೆ ಅದೇ ಕಂಬಯ್ಯನು ೯೬೦೦೦ ಪ್ರಾಂತವನ್ನು ಆಳುತ್ತಿದ್ದನೆಂದು ಇದು ಹೇಳುತ್ತದೆ  ಬದನಗುಪ್ಪೆಯ ಶಾಸನವು ಈ ಶಾಸನದ ನಂತರದ ವರ್ಷಗಳದ್ದಾಗಿದ್ದು, ಅದರಲ್ಲಿ ಆತನು ಪುನ್ನಾಡು–ಎಡೆನಾಡನ್ನು ಆಳುತ್ತಿದ್ದನೆಂದಿದೆ ಆದುದರಿಂದ ಈ ವೇಳೆಗೆ ಕಂಬಯ್ಯನ ಅಧಿಕಾರವನ್ನು ಬಹಳವಾಗಿ ಮೊಟಕುಗೊಳಿಸಲಾಗಿದ್ದು ಈತನ ಅಧಿಕಾರ ಗಂಗವಾಡಿಯ ದಕ್ಷಿಣಭಾಗಕ್ಕೆ ಮಾತ್ರ ಸೀಮಿತವಾಗಿದ್ದಂತೆ ತೋರುತ್ತದೆ

## ಚೋಳರು

ಪ್ರಸ್ತುತ ಸಂಪುಟದಲ್ಲಿ ಚೋಳ ಅರಸರ ಇಪ್ಪತ್ತಕ್ಕೂ ಹೆಚ್ಚು ಶಾಸನಗಳಿವೆ  ನಂ ಗೂ ೨೧೩ನೆಯ ಸುತ್ತೂರಿನ ಶಾಸನವು ಇವುಗಳಲ್ಲಿ ಅತ್ಯಂತ ಪ್ರಾಚೀನವಾದುದು  ಇದು ತಮಿಳು ಹಾಗೂ ಕನ್ನಡದ ದ್ವಿಭಾಷಾಶಾಸನ  ಇದರ ಲಿಪಿ ಕನ್ನಡ  ರೈಸ್‌ರವರು ಇದನ್ನು ಎರಡು ಬೇರೆ ಬೇರೆ ಶಾಸನಗಳೆಂದು (ಹಳೆಯ ಆವೃತ್ತಿಯ ನಂ ಗೂ ೧೬೦ ಮತ್ತು ೧೬೧) ಪರಿಗಣಿಸಿದ್ದಾರೆ  ಆದರೆ ವಾಸ್ತವವಾಗಿ ಈ ಎರಡು ಶಾಸನಗಳೂ ಒಂದೇ ಕಲ್ಲಿನ ಎರಡು ಮುಖಗಳಲ್ಲಿದ್ದು ಒಂದೇ ಶಾಸನದ ಭಾಗಗಳಾಗಿವೆ  ಈಗಿನ ಸುತ್ತೂರು ಗ್ರಾಮವನ್ನು ನೊತ್ತಿಯೂರ್, ಶ್ರೋತ್ರಿಯೂರ್ ಮತ್ತು ಶ್ರೋತ್ರಿಯ ಗ್ರಾಮ ಎಂದು ಕರೆಯಲಾಗುತ್ತಿತ್ತು (ನೋಡಿ ನಂ ಗೂ ೨೧೫, ೨೩೫ ಇತ್ಯಾದಿ)  ೧೨ನೆಯ ಶತಮಾನದ ನಂತರದ ಶಾಸನಗಳಲ್ಲಿ ಸುತ್ತೂರು ಎಂಬ ಹೆಸರನ್ನು ಬಳಸಿದೆ

ಪ್ರಸ್ತುತ ಶಾಸನವು (ನಂ ಗೂ ೨೧೩) ಒಡೈಯಾರ್ ಶ್ರೀಚೋಳ ಗಂಗದೇವನ ೪ನೆಯ ವರ್ಷದ ಆಳ್ವಿಕೆಗೆ ಸಂಬಂಧಿಸಿದುದಾಗಿದೆ  ಈತನನ್ನು ಒಂದನೆಯ ರಾಜೇಂದ್ರಚೋಳನೆಂದು ಗುರುತಿಸಬಹುದು  ಹಾಗಿದ್ದಲ್ಲಿ ಶಾಸನದ ಕಾಲವು ಕ್ರಿ ಶ ೧೦೧೫–೧೬ ಆಗುತ್ತದೆ  ತೇವನಾಡುವೇಲಾನ್ ಎಂಬಾತನು ಇಲ್ಲಿ ರಾಜೇಂದ್ರಚೋಳನ ಅಧಿಕಾರಿಯಾಗಿ (ವೀರಗಪ್ಪಡಿ) ಕಾಣಿಸಿಕೊಂಡಿದ್ದಾನೆ  ಎರಡು ಖಂಡುಗ ಮತ್ತು ಹತ್ತು ಬಳ್ಳ ವಿಸ್ತಾರದ ಭೂಮಿಯನ್ನು ಗ್ರಾಮದ ಸಭೆಯವರು ಮಾರಿದರೆಂದು ಹೇಳಿದೆ  ಈ ಅಳತೆ ಅಂದು ಈ ಪ್ರದೇಶದಲ್ಲಿ ಪ್ರಚಲಿತವಾಗಿದ್ದ ಭೂಮಿಯ ಅಳತೆಯಾಗಿದ್ದು (ಇನ್ನೆಲ ಕಣ್ಡುಗಪ್ಪಡಿ) ಇದು ೨ ಮಾಕಾಣಿ (ಮಾಗಾಣಿ ?)ಗೆ ಸಮವಾಗಿತ್ತೆಂದು ಕಂಡುಬರುತ್ತದೆ  ಇದರಿಂದ ಒಂದು ಖಂಡುಗ ಮತ್ತು ಐದು ಬಳ್ಳ ಭೂಮಿಯು ಒಂದು ಮಾಕಾಣಿಗೆ ಸಮವೆಂದು ಅರ್ಥವಾಗುತ್ತದೆ  ಇಲ್ಲಿ ಉಕ್ತವಾಗಿರುವ ನೊತ್ತಿಯೂರು ಮುಡಿಗೊಣ್ಡಚೋಳಮಂಡಲದ ಗಂಗೈಗೊಣ್ಡಚೋಳವಳನಾಡಿನ ಇಡೈನಾಡಿನಲ್ಲಿದೆ ಎಂದು ಹೇಳಲಾಗಿದೆ

ಇದೇ ಊರಿನ ನಂ ಗೂ ೨೧೫ನೆಯ ಶಾಸನದಲ್ಲಿ ಕಾಲಸೂಚನೆ ಸ್ಪಷ್ಟವಾಗಿದೆ  ಅದೇ ರಾಜನ, ಈ ಶಾಸನದ ಕಾಲ ಶಕವರ್ಷ ೯[೫]೫, ಹಾಗೂ ಒಂದನೆಯ ರಾಜೇಂದ್ರಚೋಳನ ಆಳ್ವಿಕೆಯ ೩೧ನೆಯ ವರ್ಷವಾಗಿತ್ತೆಂದು ಹೇಳಿದೆ ಇದು ಕ್ರಿ ಶ ೧೦೩೨ಕ್ಕೆ ಸರಿಹೊಂದುತ್ತದೆ  ರಾಜೇಂದ್ರಚೋಳನು ತನ್ನ ಆಳ್ವಿಕೆಯ ವರ್ಷಗಳನ್ನು ಕ್ರಿ ಶ ೧೦೧೨ನೆಯ ಮಾರ್ಚ್ ೨೭ ಮತ್ತು ಜುಲೈ ೭ರ ನಡುವಣ ಒಂದು ದಿನದಿಂದ ಗಣಿಸುತ್ತಾನೆ[1]  ಆದ್ದರಿಂದ ನಮ್ಮ ಶಾಸನದಲ್ಲಿ ಉಕ್ತವಾಗಿರುವ ಕಾಲವು ಆತನ ಆಳ್ವಿಕೆಯ ೨೧ನೆಯ ವರ್ಷವಾಗುತ್ತದೆ  ಶಾಸನದಲ್ಲಿ ಉಕ್ತವಾಗಿರುವಂತೆ ೩೧ನೆಯ ವರ್ಷವಲ್ಲ[2]  ಶಾಸನದಲ್ಲಿ ಒಂದನೆಯ ರಾಜೇಂದ್ರಚೋಳನ ಪ್ರಶಸ್ತಿಯು ಉಕ್ತವಾಗಿರುವುದರಿಂದ ಅದು ಅವನಿಗೆ ಸಂಬಂಧಿಸಿದ ಶಾಸನವೆಂದು ಗುರುತಿಸುವುದು ಕಷ್ಟಕರವಾದ ವಿಷಯವೇನಲ್ಲ

ಶ್ರೋತ್ರಿಯೂರಿನ ಈಶಾನ ಈಶ್ವರಮುಡೈಯಾರ್ ಮತ್ತು ಮೂಲಸ್ಥಾನಮುಡೈಯಾರ್ ದೇವಾಲಯಗಳಿಗಾಗಿ ಮಹಾಜನರು, ಸಮಯ ಮತ್ತು ಸಭೆಗಳು ಸಹ ನೀಡಿದ ಕೊಡುಗೆಯನ್ನು ಈ ಶಾಸನ ಪ್ರಸ್ತುತಪಡಿಸುತ್ತದೆ  ಇವುಗಳಲ್ಲಿ

[1] K A Nilakanta Sastri  *The Cōlas* (II Edition, 1955), p 194

[2] ಇಲ್ಲಿಯೂ ಸಹ ರೈಸ್‌ರವರು ಇದನ್ನು ಎರಡು ಶಾಸನಗಳೆಂದು ಪರಿಗಣಿಸಿರುವುದಲ್ಲದೆ ಅವನ್ನು ಬೇರೆಬೇರೆ ಕಲ್ಲುಗಳ ಮೇಲೆ ಕೆತ್ತಲಾಗಿದೆ ಎಂದಿದ್ದಾರೆ  ಆದರೆ ಶಾಸನವನ್ನು ಒಂದೇ ಶಿಲೆಯ ಎರಡು ಮುಖಗಳಲ್ಲಿ ಕಣ್ಡರಿಸಲಾಗಿದೆ  ಹಳೆಯ ಆವೃತ್ತಿಯ 165ನೆಯ ಶಾಸನವು 164ನೆಯ ಶಾಸನದ ಮುಂದುವರಿದ ಭಾಗವಾಗಿದೆ.

ಎರಡನೆಯದಾದ ಮೂಲಸ್ಥಾನ ದೇವಾಲಯವನ್ನು ಕಟ್ಟಿಸಿದಾಕೆ ಮಾರಯ್ಯಸೆಟ್ಟಿಯ ಪತ್ನಿ ಗುಂಡಬ್ಬೆ ಸುತ್ತೂರು ಇಂದು ಒಂದು ಧಾರ್ಮಿಕ ಹಾಗೂ ಶೈಕ್ಷಣಿಕ ಕೇಂದ್ರವಾಗಿದ್ದು ಇಲ್ಲಿ ವೀರಶೈವರ ಮಠವೊಂದಿದೆ ಪ್ರಸ್ತುತ ಸಂಕಟ ದಲ್ಲಿನ ಶಾಸನಗಳೇ ವ್ಯಕ್ತಪಡಿಸುವಂತೆ ಸುತ್ತೂರು ಒಂದು ಪುರಾತನ ನಗರವಾಗಿದೆ ಈ ಶಾಸನದ ಕಾಲಕ್ಕೆ (ಕ್ರಿ ಶ ೧೦೩೨) ಅಥವಾ ಅದಕ್ಕಿಂತ ಸ್ವಲ್ಪ ಮುಂಚಿತವಾಗಿಯೇ ಇಲ್ಲಿನ ಈ ಮೂಲಸ್ಥಾನ ದೇವಾಲಯ ನಿರ್ಮಾಣವಾಗಿರಬೇಕು ಆದರೆ ಈಶಾನ ಈಶ್ವರ ದೇವಾಲಯವು ಇನ್ನೂ ಪ್ರಾಚೀನವಾದುದೆಂದು ತೋರುತ್ತದೆ ಈಶಾನ ಈಶ್ವರ ಒಡೆಯರ್ ಎಂಬುದು ಸುತ್ತೂರು ಮಠದ ಗುರುಪರಂಪರೆಯಲ್ಲಿ ಎರಡನೆಯ ಗುರುವಿನ ಹೆಸರಾಗಿತ್ತು ಎಂದು ಭಾವಿಸಲಾಗಿದೆ[1] ಆದರೆ, ಅದು ದೇವರ ಹೆಸರಾಗಿದ್ದು ಆ ದೇವರ ಹೆಸರಿನಲ್ಲಿ ದೇವಾಲಯವೊಂದು ಅಂದು ಅಸ್ತಿತ್ವದಲ್ಲಿತ್ತೆಂಬುದನ್ನು ಶಾಸನವು ಸ್ಪಷ್ಟಪಡಿಸುತ್ತದೆ ದೇವರಿಗೆ ದತ್ತಿ ಬಿಡುವುದಲ್ಲದೆ ಪಂಚಮಹಾಶಬ್ದ (ಪಂಚವಾದ್ಯ)ಗಳನ್ನು ಉಪಯೋಗಿಸಲು ಏರ್ಪಾಡು ಮಾಡಲಾಗಿದ್ದು, ತಿವಳಿ, ದಟ್ಟಿ, ಖಂಡಿಕೆ, ಜಯಗಣ್ಟೆ ಮತ್ತು ಕಾಳೆ ಎಂಬಿವೇ ಆ ವಾದ್ಯಗಳು ಎಂಬ ಅಂಶ ಶಾಸನದಿಂದ ವ್ಯಕ್ತವಾಗುತ್ತದೆ

ಶಕ ೯೪೩ಕ್ಕೆ ಸಮನಾದ ಕ್ರಿ ಶ ೧೦೨೧ರ ನಂದಿಗುನ್ದ ಶಾಸನದಲ್ಲಿ (ನಂ ಗೂ ೨೦೧) ಅರಸನ ಹೆಸರಿಲ್ಲ ಆದರೆ 'ತಿರುಮಣ್ಣಿವಳರ' ಎಂದು ಆರಂಭವಾಗುವ ಒಂದನೆಯ ರಾಜೇಂದ್ರಚೋಳನ ಪ್ರಶಸ್ತಿ ಶಾಸನದ ಆರಂಭದಲ್ಲಿದೆ ಆದ್ದರಿಂದ ಆ ಶಾಸನ ರಾಜೇಂದ್ರಚೋಳನದೆಂದು ಗುರುತಿಸಬಹುದು ಮುಸಂಗಿಯಲ್ಲಿ ಚಾಳುಕ್ಯ ಜಯಸಿಂಹನೊಡನೆ ಹೋರಾಡಿ ಪಡೆದ ವಿಜಯ ಮತ್ತು ರಟ್ಟವಾಡಿಯ ಆಕ್ರಮಣದ ವಿವರದೊಡನೆ ಪ್ರಶಸ್ತಿ ಮುಕ್ತಾಯಗೊಳ್ಳುತ್ತದೆ ಅದೇ ಕಲ್ಲಿನ ಹಿಂಭಾಗದಲ್ಲಿ ಮುಂದುವರಿದ ಶಾಸನ ದೇವಾಲಯಕ್ಕೆ ಕೊಟ್ಟ ದಾನಗಳ ವಿವರಗಳನ್ನು ನೀಡಿದೆ ಈ ಶಾಸನದ ಕಾಲ ಕ್ರಿ ಶ ೧೦೨೧ ಮಾರ್ಚ್ ೧ ಈ ಹೊತ್ತಿಗಾಗಲೇ ಮುಸಂಗಿ ಅರ್ಥಾತ್ ರಾಯಚೂರು ಜಿಲ್ಲೆಯ ಮಸ್ಕಿಯ ಕದನದಲ್ಲಿ ಅರಸನ ದಿಗ್ವಿಜಯವು ಪ್ರಶಸ್ತಿಯಲ್ಲಿ ಸೇರ್ಪಡೆಯಾಗಿರುವುದರಿಂದ, ಉಕ್ತವಾದ ತೇದಿಗೂ ಕೆಲ ತಿಂಗಳುಗಳ ಮೊದಲೇ ಈ ಕದನ ಸಂಭವಿಸಿರಬಹುದೆಂದು ಊಹಿಸಲು ಅವಕಾಶವಿದೆ ಆಸ್ಥಾನಕವಿಗಳು ಪ್ರಶಸ್ತಿಯನ್ನು ಪರಿಷ್ಕರಿಸಿ ಈ ವಿವರವನ್ನೂ ಸೇರಿಸಲು ಹಾಗೂ ಅಧಿಕಾರಿಗಳು ಇದನ್ನು ತಮ್ಮ ಶಾಸನಗಳಲ್ಲಿ ಬಳಸಲು ಕನಿಷ್ಠಪಕ್ಷ ೨ ಅಥವಾ ೩ ತಿಂಗಳ ಕಾಲಾವಕಾಶ ಬೇಕಾಗುತ್ತದೆಂದು ಭಾವಿಸಿದಲ್ಲಿ ಇಮ್ಮಡಿ ಜಯಸಿಂಹನ ವಿರುದ್ಧ ಮಸ್ಕಿಯಲ್ಲಿ ನಡೆದ ಕದನವು ಕ್ರಿ ಶ ೧೦೨೦ನೆಯ ಉತ್ತರಾರ್ಧ ಅಥವಾ ೧೦೨೧ನೆಯ ಜನವರಿ ಮಾಸದಲ್ಲಿ ನಡೆಯಿತೆಂದು ಹೇಳಲು ಅವಕಾಶವಿದೆ

ಶಾಸನದಲ್ಲಿ ತೇದಿಯನ್ನು ಸೂಚಿಸಿದ ನಂತರ ಎಡೆದೊರೆನಾಡನ್ನು ಸುರಕ್ಷಿತವಾಗಿ ಇಡಲಾಯಿತೆಂದು ಹೇಳಿದೆ (ಎಡೆದೊರೆನಾಡುಳ್ ಪದಿನಿಕ್ಕಿ) ಇದು ಚೋಳ ರಾಜನಿಗೇ ಅನ್ವಯಿಸುವುದೆಂದೂ, ಆ ಪ್ರಾಂತದಲ್ಲಿ ಸರಿಯಾದ ಆಡಳಿತವನ್ನು ನಿರ್ವಹಿಸಲು ಮತ್ತು ಶಾಂತಿ ನೆಲೆಗೊಳಿಸಲು ಈತನು ಏರ್ಪಾಟುಮಾಡಿದನೆಂದೂ ತರ್ಕಿಸಬಹುದು ಈ ಎಡೆದೊರೆನಾಡನ್ನು ಕಾವೇರಿಯ ಪಶ್ಚಿಮಕ್ಕಿರುವ ಎಡತೊರೆನಾಡು ಎಂದು ಗುರುತಿಸಬಹುದಾದರೂ ಈ ಪ್ರಾಂತ ಅವನ ಆಡಳಿತಕ್ಕೆ ಈ ವೇಳೆಗಾಗಲೇ ಬಂದಿತ್ತಾದ ಕಾರಣ ಸುಮಾರು ಈ ಶಾಸನದ ಕಾಲದವೇಳೆಗೆ ಈ ಪ್ರಾಂತದಲ್ಲಿ ಯಾವುದೋ ಗಲಭೆಯುಂಟಾಗಿ ಅದನ್ನು ಅಡಗಿಸಿ ಇಲ್ಲಿ ಆತನು ಶಾಂತಿಯನ್ನು ನೆಲೆಗೊಳಿಸಿರಬೇಕೆಂದು ಊಹಿಸಬೇಕಾಗು ತ್ತದೆ ಈಗಿನ ರಾಯಚೂರು ಜಿಲ್ಲೆಯ ಹೆಚ್ಚಿನಭಾಗವನ್ನೊಳಗೊಂಡ ಕೃಷ್ಣಾ ಮತ್ತು ತುಂಗಭದ್ರಾ ನದಿಗಳ ನಡುವಣ ಪ್ರದೇಶಕ್ಕೂ ಎಡದೊರೆ ಎಂಬ ಹೆಸರಿತ್ತು[2] ಕದನಕ್ಷೇತ್ರವಾದ ಮಸ್ಕಿಯು ಈ ಪ್ರದೇಶದಲ್ಲಿದ್ದು ಆತನು ದಿಗ್ವಿಜಯಾ ನಂತರ ಈ ಪ್ರದೇಶದಲ್ಲಿ ಶಾಂತಿ ನೆಲೆಗೊಳ್ಳುವಂತೆ ಮಾಡಲು ಪ್ರಯತ್ನಿಸಿದನೆಂದು ಊಹಿಸುವುದು ಹೆಚ್ಚು ಸಮಂಜಸ ವೆನಿಸುತ್ತದೆ ಶಾಸನ ದೊರೆತ ಸ್ಥಳವಾದ ನಂದಿಗುನ್ದವು ಮೈಸೂರು ನಾಡಿನಲ್ಲಿದೆ

ಕ್ರಿ ಶ ೧೦೩೭ನೆಯ ವರ್ಷದ ಅಂಕನಾಥಪುರದ ಹೆ ಕೋ ೭ನೆಯ ಶಾಸನವು ನೊಲನಾಡಿನಲ್ಲಿ ಕೂಡಲೂರಿನ ನಿಗಳಂಕಮಲ್ಲಚಂಗಾಳ್ವನು ಮುತ್ತಿಗೆಹಾಕಿದಾಗ ಪ್ಸಿಂಗೆಯ ಹಲವು ಗಾವುಣ್ಡರು, ನಾಗಮಂಗಲವನ್ನು ಕಲ್ನಾಡಾಗಿ ಪಡೆದರೆಂದು ತಿಳಿಸುತ್ತದೆ ಪಲರ್ಮೆಚ್ಚೆಗಂಡ ಮತ್ತು ತೆಲಗರಮಾರಿ ಎಂಬ ಬಿರುದುಗಳನ್ನು ಹೊಂದಿದ್ದ ಮಹಾಮಣ್ಡಲೇಶ್ವರ ಪಂಚವಮಾರಾಯನು ಆ ಬಿರುದುಗಳನ್ನು ಕೆಲವು ಗಾವುಂಡರಿಗೆ ಕೊಟ್ಟನು ಎಂದಿದೆ ಒಂದನೆಯ ರಾಜೇಂದ್ರಚೋಳನು ಪಂಚವನ್ ಮಾರಾಯ ಎಂಬ ಬಿರುದನ್ನು ಹೊಂದಿದ್ದನೆಂಬುದು ಚೋಳ ರಾಜರಾಜನ

---

[1] ಎಂ ಜಿ ನಂಜುಂಡಾರಾಧ್ಯ ಶಿವರಾತ್ರಿ ಶಿವಾಚಾರ್ಯ (೧೯೬೧) p XIII-XIV

[2] *Epigraphia Indica* XII, p 295-96

ಮಾಲಂಬಿಶಾಸನದಿಂದ ತಿಳಿದಿದೆ[1] ಆದ್ದರಿಂದ ಪ್ರಸ್ತುತ ಶಾಸನದಲ್ಲಿ ಬರುವ ಪಂಚವಮಹಾರಾಯನನ್ನೂ ರಾಜೇಂದ್ರ ಚೋಳನೆಂದೇ ಗುರುತಿಸಲು ಅವಕಾಶವಿದೆ ಆದರೆ, ಈ ಶಾಸನದಲ್ಲಿ ಆತನನು ಕೇವಲ ಮಹಾಮಣ್ಡಲೇಶ್ವರನೆಂದು ಸಂಬೋಧಿಸಲು ಕಾರಣಗಳನ್ನು ವಿವರಿಸುವುದು ಸುಲಭವಲ್ಲ ಈ ಶಾಸನದ ಕಾಲದ ವೇಳೆಗೆ ಚಂಗಾಳ್ವರು ಚೋಳರ ಸಾರ್ವಭೌಮತ್ವವನ್ನು ಒಪ್ಪಿರಲಿಲ್ಲವೆಂಬುದು ಸ್ಪಷ್ಟವಾಗುತ್ತದೆ ಚಂಗಾಳ್ವನ ಹೆಸರನ್ನು ಇಲ್ಲಿ ಕೊಟ್ಟಿಲ್ಲ ಹನಸೋಗೆಯ ಶಾಸನದ ಹೇಳಿಕೆಯನ್ನಾಧರಿಸಿ ತನ್ನ ಸ್ವಂತ ಹೆಸರಿನ ಜೊತೆಗೆ ರಾಜೇಂದ್ರಚೋಳನೆಂಬ ಅಭಿದಾನವನ್ನು ಧರಿಸಿದ ನನ್ನಿಚಂಗಾಳ್ವನು ಚೋಳದೊರೆಯಿಂದ ಪರಾಜಿತನಾದ ಮೊದಲನೆಯ ಅರಸನೆಂದು ರೈಸ್‌ರವರು ಭಾವಿಸಿದ್ದರು ಅಲ್ಲದೆ ಮಾಲಂಬಿ ಶಾಸನದಲ್ಲಿನ ಹೇಳಿಕೆಯನ್ನಾಧರಿಸಿ ಪನಸೋಗೆಯ ಯುದ್ಧದಲ್ಲಿ ಸೋಲಿಸಲಾದ ಚಂಗಾಳ್ವನು ಈತನೇ ಎಂದು ಅವರು ಅಭಿಪ್ರಾಯಪಟ್ಟಿದ್ದಾರೆ[2] ಆದರೆ, ಆ ಶಾಸನದಲ್ಲಿ ಮನಿಜನಿಂದ ಸೋಲಿಸಲ್ಪಟ್ಟ ವೈರಿಗಳ ಹೆಸರನ್ನೇ ಹೇಳಿಲ್ಲ ಪ್ರಸ್ತುತ ಶಾಸನದಲ್ಲಿ ಕ್ರಿ ಶ ೧೦೩೭ರಲ್ಲಿ ಚಂಗಾಳ್ವರು ಚೋಳರ ಅಧೀನದಲ್ಲಿದ್ದ ನಾಡನ್ನು ಮುತ್ತಿದರೆಂಬ ವಿಷಯದ ಪ್ರಸ್ತಾಪವಿರುವುದರಿಂದ ಈ ಶಾಸನ ಕಾಲದ ವೇಳೆಗೂ ಇನ್ನೂ ಚಂಗಾಳ್ವರು ಸ್ವತಂತ್ರರಾಗಿಯೇ ಇದ್ದರೆಂಬುದು ಸ್ಪಷ್ಟವಾಗುತ್ತದೆ[3]

ಹೆ ಕೋ ೬೦ ಕ್ರಿ ಶ ೧೦೫೭ನೆಯ ವರ್ಷದ ಇಮ್ಮಡಿ ರಾಜೇಂದ್ರಚೋಳನ ಶಾಸನ ಇದು ಕುಱುವನ್ದ ವಂಶಕ್ಕೆ ಸೇರಿದ ಪೆರ್ಮ್ಮೆಯಲಿನ ಏಚನ ಪತ್ನಿಯಾದ ದೇಕಬ್ಬೆಯ ಮರಣವೃತ್ತಾಂತವನ್ನು ತಿಳಿಸುವ ಸುಂದರವಾದ ಕಾವ್ಯಾತ್ಮಕ ರಚನೆಯಾಗಿದೆ[4] ಈ ಶಾಸನದಲ್ಲಿ ಆಕೆಯ ತಂದೆತಾಯಿಗಳ ವಂಶಾವಳಿಯನ್ನು ಕೊಟ್ಟಿದೆ ಆಕೆಯ ತಂದೆಯಾದ ರವಿಗನು ನುಗುನಾಡಿನ ಅಧಿಕಾರಿಯಾಗಿದ್ದ ತಾತ (ತಾಯಿಯ ತಂದೆ) ಎಡೆನಾಡಿನ ಅಧಿಪತಿಯಾಗಿದ್ದನು

**ನುಗುನಾಡಿನ ಅಧಿಪರು** | **ಎಡನಾಡಿನ ಅಧಿಪರು**

ಎಱೆಯಂಗ
|
ಏಚ
|
ಜವನಿಯಮ್ಮ (ಪತ್ನಿ–ಜಾಕಬ್ಬೆ)
|
ರವಿಗ — ಪತ್ನಿ — ಪೊನ್ನಕ್ಕ
|
ದೇಕಬ್ಬೆ ನವಿಲೆ ನಾಡಿನ ಏಚನೊಡನೆ ಮದುವೆ

ಸತ್ಯವಾಕ್ಯ ನಾಲ್ಗೋಜ (ಪತ್ನಿ–ಬೂತಬ್ಬೆ)
|
ಪೊನ್ನಕ್ಕ

ಕುಡಿಯರ ವಂಶಕ್ಕೆ ಸೇರಿದ ರವಿಗನು ಎಡೆನಾಡಿನ ಅಧಿಪನಾದ ನಾಲ್ಗೋಜನ ಮಗಳಾದ ಪೊನ್ನಕ್ಕನನ್ನು ವರಿಸಿದ್ದ ಇವರಿಬ್ಬರಿಗೆ ಜನಿಸಿದ ದೇಕಬ್ಬೆಯನ್ನು ನವಿಲೆನಾಡಿನ ಏಚನು ವಿವಾಹವಾದ ಉತ್ತಮ ಜಟ್ಟಿ (ಜಟ್ಟಿಗ) ಯಾಗಿದ್ದ ಈ ಏಚನು ಯಾವುದೋ ಸಂದರ್ಭದಲ್ಲಿ ಶೌರ್ಯದಿಂದ ತನ್ನ ದಾಯಿಗನನ್ನು ಇರಿದ (ಒಟ್ಟೆಜೆಯಿನಿಱಿದು) ನೆಂದು ಹೇಳಲಾಗಿದೆ[5] ಈ ಸಾವು ಹತ್ಯೆಯೆಂದು ಪರಿಗಣಿಸಲ್ಪಟ್ಟು ಏಚನನ್ನು ತಲಕಾಡಿಗೆ ಒಯ್ಯಲಾಯಿತು ಅಲ್ಲಿ ಅರಸನು ಇವನನ್ನು ಮರಣಶಿಕ್ಷೆಗೊಳಪಡಿಸಿದನು ಇದನ್ನು ಕೇಳಿದ ದೇಕಬ್ಬೆಯು ಸತಿಯಾಗಲು ನಿರ್ಧರಿಸಿದಳು ಆಕೆಯ ಮಾತಾಪಿತೃಗಳು ಮತ್ತು ಸಂಬಂದಿಕರು ಆಕೆಯನ್ನು ತಡೆಯಲು ಯತ್ನಿಸಿದಾಗ, "ನುಗುನಾಡಿನ ಅಧಿಕಾರಿಯ ಮಗಳೂ

---

1 ಎ ಕ, ಸಂಪುಟ ೧ (ಪರಿಷ್ಕೃತ ಆವೃತ್ತಿ 1972), ಪೀಠಿಕೆ, ಪು XXXI

2 B L Rice *Mysore and Coorg from Inscriptions*, p 142

3 ರಾಜೇಂದ್ರಚೋಳನು ಯುವರಾಜನಾಗಿದ್ದಲೇ ಚಂಗಾಳ್ವರ ಮೇಲೆ ವಿಜಯವನ್ನು ಸಾಧಿಸಿದ್ದನು ಬಹುಶಃ ಕ್ರಿ ಶ ೧೦೩೭ರ ಸುಮಾರಿಗೆ ಚಂಗಾಳ್ವರು ದಂಗೆ ಎದ್ದಿರಬಹುದು ಎಂದು ಡಾ ಮಹಾಲಿಂಗಂ ಅವರು ಹೇಳುತ್ತಾರೆ

4 ಈ ಶಾಸನ ಎಪಿಗ್ರಾಫಿಯ ಇಂಡಿಕಾದ ಆರನೆಯ ಸಂಪುಟದಲ್ಲಿ ಪ್ರಕಟವಾಗಿವೆ ಇದನ್ನು ಕೆಳಗೆ ಪ್ರಸ್ತಾಪಿಸಲಾಗಿದೆ

5 ಶಕ್ತಿಯುತನಾಗಿದ್ದ ಈ ಜಟ್ಟಿಗ ಏಚನು ದುರದೃಷ್ಟವಶಾತ್ ಸ್ಪರ್ಧೆಯೊಂದರಲ್ಲಿ ತನ್ನ ವಿರೋಧಿಯನ್ನು ಕೊಂದ ಆತನು ಅರಸನಿಗೆ ಸಂಬಂಧಿಸಿದವನೆಂದು ತೋರುತ್ತದೆ ಎಂದು ರೈಸ್‌ರವರು ಅಭಿಪ್ರಾಯಪಟ್ಟಿದ್ದಾರೆ (ಎ ಕ III (ಮೊದಲ ಆವೃತ್ತಿ), Introduction, p 15) ಆದರೆ ಈ ಊಹೆ ಆಧಾರರಹಿತವಾದುದಾಗಿದೆ

ನವಿಲೆನಾಡಿನ ಅಧಿಕಾರಿಯ ಪತ್ನಿಯೂ ಆದ ನಾನು ಜೀವಿಸಿದ್ದೇ ಆದರೆ ಎರಡೂ ವಂಶದ ಕೀರ್ತಿಗೆ ಕಳಂಕ ಉಂಟಾಗುವುದು" ಎಂದು ವಾದಿಸಿ, ಅವರನ್ನು ಒಪ್ಪಿಸಿದಳು ಅನಂತರ, ಆಕೆ ದೇವರ ನೈವೇದ್ಯ ಹಾಗೂ ನಂದಾದೀಪಕ್ಕಾಗಿ ಭೂಮಿ ಮತ್ತು ತೋಟವನ್ನು ದಾನವಾಗಿ ಕೊಟ್ಟು ಪ್ರಾಣವನ್ನು ತ್ಯಜಿಸಿದಳು ತಲಕಾಡು ಅಂದಿನ ರಾಜಧಾನಿಯಾಗಿದ್ದಿರಬೇಕು ಆ ಕಾರಣದಿಂದಲೇ ಏಚನನ್ನು ಅಲ್ಲಿಗೆ ಕರೆದೊಯ್ದಿರಬೇಕು ಕೊಲೆಯ ಅಪರಾಧಕ್ಕೆ ಮರಣದಂಡನೆಯನ್ನು ವಿಧಿಸುತ್ತಿದ್ದ ವಿಷಯವೂ ಇದರಿಂದ ವ್ಯಕ್ತವಾಗುತ್ತದೆ ಈ ಶಾಸನವು ಸುಲಭವಾದ ಪದ್ಯರೂಪದಲ್ಲಿದ್ದು ಇದರಲ್ಲಿ ಕರುಣರಸವೇ ಪ್ರಧಾನವಾಗಿದೆ ಕವಿಯಾದ ಮಲ್ಲನನ್ನು ಕವಿರಾಜಬಾನ್ಧವ ಎಂದು ವರ್ಣಿಸಲಾಗಿದೆ

ರೆ ಕಿಟ್ಟೆಲ್‌ರವರಿಂದ ಈ ಶಾಸನ ಈ ಮೊದಲೇ ಪ್ರಕಟವಾಗಿದೆ ಪೊನ್ನಕ್ಕನ ತಾಯಿ ಬೂತಬ್ಬೆ ಆದರೆ ಪೊನ್ನಕ್ಕನ ತಂದೆಯಾದ ರವಿಗನ ಮಾವನ ಹೆಸರು ಶಾಸನದಲ್ಲಿ ಉಕ್ತವಾಗಿಲ್ಲವೆಂದು ಅವರು ಹೇಳಿದ್ದಾರೆ ಕಿಟ್ಟೆಲ್‌ರವರ ಪ್ರಕಾರ ಪೊನ್ನಕ್ಕನ ತಂದೆ ಎಡೆನಾಡಿನ ನಾಲ್ಗ್ರೋಡಿನ ಹಿರಿಯ ಅಧಿಕಾರಿ (ನಾಲ್ಗ್ರೋಡಿನ ಮುಖ್ಯ) ಯಾಗಿದ್ದ ಆದರೆ ಆತ ಎಡೆನಾಡಿನ ಅಧಿಪತಿ (ಎಡೆನಾಡಧಿಪತಿ) ಯೂ ಆಗಿದ್ದ ಶಾಸನ ಪಾಠವನ್ನು ವ್ಯತ್ಯಾಸವಾಗಿ ಓದಿದುದರ ಪರಿಣಾಮವಾಗಿ ಈ ರೀತಿಯ ಅಭಿಪ್ರಾಯಗಳುಂಟಾಗಿವೆ ರೈಸ್‌ರವರು ಶಾಸನದ ಈ ಭಾಗದಲ್ಲಿನ ಹೆಸರನ್ನು (ಶಾಸನ ಪಾಠದ ೧೩ನೆಯ ಸಾಲು) ನಾಲ್ಗ್ರೋಜ ಎಂದು ಓದಿದ್ದಾರೆ ಈ ಪಾಠವನ್ನು ನಾವು ಒಪ್ಪಿದ್ದೇವೆ ಇದರಿಂದ ಪೊನ್ನಕ್ಕನ ತಂದೆಯ ಹೆಸರು ಸತ್ಯವಾಕ್ಯ ನಾಲ್ಗ್ರೋಜ ಎಂದು ತಿಳಿದುಬರುತ್ತದೆ ೧೪ನೆಯ ವೃತ್ತದ ಭಾಷಾಂತರದಲ್ಲಿ (೧೯-೨೦ ನೆಯ ಸಾಲುಗಳು) ದೇಕಬ್ಬೆಯ ಪತಿಯು ಇರಿದು ಕೊಂದ ದಾಯಿಗನು ಚೋಳರಾಜನ ದಾಯಿಗನಾಗಿರಬಹುದು ಅಥವಾ ಏಚನ ದಾಯಿಗನಾದರೂ ಆಗಿರಬಹುದೆಂದು ಕಿಟ್ಟೆಲ್‌ರವರು ಹೇಳಿದ್ದಾರೆ[1] ಏಚನು ಪರಾಕ್ರಮಿಯಾದ ಜಟ್ಟಿಗನಾಗಿದ್ದು ಆತ ತನ್ನ ಪರಾಕ್ರಮದಿಂದ ದಾಯಿಗನನ್ನು ಕೊಂದನೆಂದು ವರ್ಣಿಸಲಾಗಿದೆ ಕೊಲೆಯಾದವನು ರಾಜನ ದಾಯಾದಿ ಎಂದಿಟ್ಟುಕೊಂಡರೆ ಏಚನು ಅವನಿಗಿಂತಲೂ ಮೇಲುಗೈ ಉಳ್ಳವನಾಗಿರಬೇಕೆಂಬ ಅಭಿಪ್ರಾಯ ಉಂಟಾಗುತ್ತದೆಯಲ್ಲದೆ, ಅಲ್ಲಿದ್ದ ರಾಜನ ದಾಯಿಗರು ಯಾರು ಮತ್ತು ಅವರ ಸ್ಥಾನಮಾನಗಳೇನು ಎಂಬ ಪ್ರಶ್ನೆಗಳು ಸಹ ಉದ್ಭವಿಸುತ್ತವೆ ಮನೆತನದ ಅಂತಃಕಲಹದ ಫಲಿತಾಂಶ ಕೊಲೆಯಲ್ಲಿ ಮುಕ್ತಾಯಗೊಂಡಿತು ಎಂಬುದೇ ಹೆಚ್ಚು ಸಮಂಜಸವೆನಿಸುತ್ತದೆ ಕಿಟ್ಟೆಲ್‌ರವರು ದೇಕಬ್ಬೆಯ ಮರಣವನ್ನು ಆತ್ಮಬಲಿ ಎಂದು ವರ್ಣಿಸಿ ಅದು ಸತಿ ಪದ್ಧತಿಗಿಂತ ಭಿನ್ನವೆಂದು ಭಾವಿಸಿದ್ದಾರೆ ಈ ವ್ಯತ್ಯಾಸ ಅತಿಸೂಕ್ಷ್ಮ ರೀತಿಯದ್ದಾಗಿದೆ

ಕ್ರಿ ಶ ೧೦೬೩ನೆಯ ವರ್ಷದ (ಹೆ ಕೋ ೩೪ನೆಯ) ಇಮ್ಮಡಿ ರಾಜೇಂದ್ರಚೋಳನ ಶಾಸನದಲ್ಲಿ ಆತನನ್ನು ರಾಜಕೇಸರಿ ಎಂದು ಕರೆಯಲಾಗಿದೆ ನೆವಲೆನಾಡು ಮುಡಿಗೊಂಡಚೋಳಮಂಡಲದ ಒಂದು ಭಾಗವಾಗಿತ್ತೆಂದು ಅದರಲ್ಲಿ ಹೇಳಿದೆ ಪ್ರಸ್ತುತ ಆವೃತ್ತಿಯಲ್ಲಿ ಮುದ್ರಣವಾಗಿರುವ ಈ ಶಾಸನಪಾಠವು ರೈಸ್‌ರವರಿತ್ತ ಪಾಠಕ್ಕಿಂತ ಭಿನ್ನವಾಗಿದೆ ರೈಸ್‌ರವರು ಕೆಜೆಯೂರಿನ ನಾಗಣ್ಣನು ನಾಡಿನ ಒಡೆಯ ಗಂಗಯನ ಮತ್ಸರಕ್ಕೆ ಹೆದರಿ ಅವನಿಗೆ ಶರಣಾಗತನಾದನೆಂದೂ, ಆಗ ಗಂಗಯನ ಮಗ ಸರಚಗಾವುಣ್ಡನು ನಾವು ನಾಗಣ್ಣನನ್ನು ಸಹಿಸಲಾರೆವು ಎಂದು ಹೇಳಿದನೆಂದೂ ಮುಂತಾಗಿ ಅರ್ಥೈಸಿದ್ದಾರೆ[2] ಶಾಸನವು ಭಗ್ನವಾಗಿರುವುದರಿಂದ ಅರ್ಥವಿವರಣೆ ಸ್ಪಷ್ಟವಾಗುವುದಿಲ್ಲವೆಂದು ಅಡಿಟಿಪ್ಪಣಿಯಲ್ಲಿ ಹೇಳಿದ್ದಾರೆ ಕೆಜೆಯೂರ ನಾಗಣ್ಣನು ಕೊಳಿಗಾಲದ ಸಂಗಯನನ್ನು ಕೊಂದನೆಂದೂ, ಅದಕ್ಕೆ ಪ್ರತಿಯಾಗಿ ಮೇಲೆ ಹೇಳಿದ ನಾಗಣ್ಣನು ರಾಚಗಾವುಣ್ಡನಿಂದ ಹತನಾದನೆಂದೂ ಶಾಸನದಿಂದ ತಿಳಿದುಬರುತ್ತದೆ ರಾಚಗಾವುಣ್ಡನಿಗೆ ಗಣ್ಡರಾದಿತ್ಯ ಚೋಳಗಾಮುಣ್ಡನೆಂಬ ಇನ್ನೊಂದು ಹೆಸರಿದ್ದಿತೆಂದೋ ಅಥವಾ ಆ ಹೆಸರಿನ ಬಿರುದು ಕೊಡಲ್ಪಟ್ಟಿತೆಂದೋ ತೋರುತ್ತದೆ ಶಾಸನದ ಕಲ್ಲನ್ನು ನೆಡಿಸಿದ ಗಂಗಗೊಣ್ಡನ ಮಗ ರಾಚಗೊಣ್ಡನು ಬೇರೊಬ್ಬ ವ್ಯಕ್ತಿ ವೀರವಣವನ್ನು ಪಡೆದು ಭೂಮಿಯನ್ನು ವಿಕ್ರಯಿಸಿದ ನಾಡಗಣ್ಡರಾದಿತ್ಯ ಚೋಳಗಾಮುಣ್ಡನೂ ಸಹ ಭಿನ್ನವಾದ ವ್ಯಕ್ತಿಯೇ ಕಲ್ಲನ್ನು ಕೆತ್ತಿದ ಶಿಲ್ಪಿ ಕೇತಾಚಾರಿ ಈತನು ಭೂಮಿಯನ್ನು ದಾನವಾಗಿ ಪಡೆದಂತೆ ತೋರುತ್ತದೆ ಕ್ರಿ ಶ ೧೦೫೩ನೆಯ ವರ್ಷದ ರಾಜಾದಿತ್ಯನ ಹೆ ಕೋ ೩೨ನೆಯ ಶಾಸನದಲ್ಲಿ ಉತ್ತಮ ಚೋಳಗಾವುಣ್ಡನ ಮಗ ರಾಚಯನು ನಾಡಗಣ್ಡರಾದಿತ್ಯಚೋಳಗಾಮುಣ್ಡನೆಂಬ ಬಿರುದನ್ನು ಹೊಂದಿದ್ದಂತೆ ಕಂಡುಬರುತ್ತದೆ ಈ ವ್ಯಕ್ತಿ ಮೇಲೆ ಹೇಳಿದ ಕ್ರಿ ಶ ೧೦೬೩ರ ಶಾಸನದಲ್ಲಿ ಕಾಣಿಸಿಕೊಂಡ ನಾಡಗಣ್ಡರಾದಿತ್ಯ ಚೋಳಗಾಮುಣ್ಡನಾಗಿರಬಹುದೇ ? ಈ ಕುರಿತು ಏನನ್ನೂ ನಿಶ್ಚಿತವಾಗಿ ಹೇಳಲಾಗದು

---

[1] *Ep Ind*, VI, p 218, note 6

[2] ಎ ಕ IV, Hg 115, Rice's edition, Translation p 80

ಬೇಕಾದ ವಿವರಗಳು ಇದರಲ್ಲಿಲ್ಲ ಉಕ್ತನಾದ ಅರಸನು ಇಮ್ಮಡಿ ಬಲ್ಲಾಳನೇ ಅಥವಾ ಮೂರನೆಯ ಬಲ್ಲಾಳನೇ ಎಂದು ಖಚಿತವಾಗಿ ಹೇಳಲೂ ಸಾಧ್ಯವಿಲ್ಲ ಏಕೆಂದರೆ ಇವರಿಬ್ಬರ ಆಳಿಕೆಯ ಕಾಲದಲ್ಲೂ ಶಾರ್ವರಿ ಸಂವತ್ಸರವು ಬಂದಿದೆ ಈ ಶಾಸನದಲ್ಲಿ ನುಗುನಾಡು ಮುಡಿಗೊಣ್ಡಶೋಳಮಣ್ಡಲಮ್‍ಗೆ ಸೇರಿದ ಗಂಗೈಕೊಂಣ್ಡಶೋಳವಳನಾಡಿನಲ್ಲಿತ್ತೆಂದು ಹೇಳಿದೆ ಆದ್ದರಿಂದ ಶಾಸನ ಹುಟ್ಟಿದ ಕಾಲದಲ್ಲಿ ಆ ಪ್ರದೇಶವು ಚೋಳರ ಅಧೀನದಲ್ಲಿದ್ದು ಆ ಪ್ರದೇಶಗಳಿಗೆ ತಮ್ಮ ಅರಸರ ಹೆಸರನ್ನೇ ಅವರು ಕೊಟ್ಟಿದ್ದರೆಂಬುದು ಇದರಿಂದ ಸೂಚಿತವಾಗುತ್ತದೆ ಕ್ರಿ ಶ ೧೧೧೧-೨೨ರಲ್ಲಿ ಕುಡುಗುನಾಡು ಸಹ ಇದೇ ಪ್ರದೇಶಕ್ಕೆ ಸೇರಿತ್ತೆಂಬುದನ್ನು ಮೇಲೆ ಗಮನಿಸಿದ್ದೇವೆ ಕ್ರಿ ಶ ೧೧೧೬ನೆಯ ವರ್ಷದ ಶಾಸನದಲ್ಲಿ ಕುಡುಗುನಾಡು ತಮಿಳು ಹೆಸರುಗಳುಳ್ಳ ಪ್ರಾಂತದ ಭಾಗವಾಗಿತ್ತೆಂದು ಹೇಳಿಲ್ಲ ಕ್ರಿ ಶ ೧೨೧೮ (ಹೆ ಕೋ ೮೧)ರ ಶಾಸನದ ಪ್ರಕಾರ ನುಗುನಾಡು ಸಹ ಈ ಪ್ರದೇಶಗಳೊಡನೆ ಸಂಬಂಧ ಹೊಂದಿಲ್ಲ ಆದ್ದರಿಂದ ಈ ಶಾಸನವು ಕ್ರಿ ಶ ೧೨೮೦ಕ್ಕೂ ಮೊದಲು, ಕ್ರಿ ಶ ೧೧೧೬ಕ್ಕೂ ಹಿಂದಿನ ವರ್ಷದಲ್ಲಿ ಹುಟ್ಟಿದ್ದಾಗಿರಬಹುದೆಂದು ಹೇಳಬಹುದು ಶಾರ್ವರಿ ಸಂವತ್ಸರವು ಕ್ರಿ ಶ ೧೧೮೦ಕ್ಕೆ ಸರಿಹೋಗುತ್ತದೆ ಆದ್ದರಿಂದ ಈ ಶಾಸನದ ಕಾಲ ೧೧೮೦ ಮತ್ತು ಅದರಲ್ಲಿ ಉಕ್ತವಾಗಿರುವ ಅರಸನು ಎರಡನೆಯ ಬಲ್ಲಾಳನಾಗಿರಬಹುದೆಂದು ಹೇಳಬಹುದು

ಕ್ರಿ ಶ ೧೨೧೮ರ (ಹೆ ಕೋ ೮೧ ಮತ್ತು ೮೩) ಶಾಸನಗಳಲ್ಲಿ ಕುಮಾರ ಮಾಧವದಣ್ಣಾಯಕನು ಎರಡನೆಯ ವೀರಬಲ್ಲಾಳನ ಅಧೀನನಾಗಿ ಕುಮಾರನಾಡನ್ನು ಏಕಾಧಿಷ್ಠಿತವಾಗಿ ಆಳುತ್ತಿದ್ದನೆಂದು ಹೇಳಿದೆ ಆತನನ್ನು ಮಹಾಪ್ರಧಾನ, ಸರ್ವಾಧಿಕಾರಿ, ಮಹಾಪಸಾಯಿತ, ಬಾಹತ್ತರನಿಯೋಗಾಧಿಪತಿ ಮತ್ತು ಅನೇಕದೇಶಾಧಿಪತಿ ಎಂದು ವರ್ಣಿಸಲಾಗಿದೆ ಆತನೊಡನೆ ಕೇಶವದಣ್ಣಾಯಕನ ಹೆಸರನ್ನೂ ಶಾಸನದಲ್ಲಿ ಪ್ರಸ್ತಾಪಿಸಲಾಗಿದೆ ಆದರೆ ಅವರ ಪರಸ್ಪರ ಸಂಬಂಧ ತಿಳಿದಿಲ್ಲ ನುಗುನಾಡಿಗೆ ಸೇರಿದ್ದ ಕುಂದೂರು ಗ್ರಾಮವನ್ನು ಕಲ್ಲಂಬಾಳಿನ ಕಾಮೇಶ್ವರದೇವರಿಗೆ ವತ್ತಿಯಾಗಿ ಕೊಡಲಾಗಿತ್ತು ಕುಂದೂರಿನಲ್ಲಿ ದೊರೆತ ಹೆ ಕೋ ೮೩ನೆಯ ಶಾಸನವು ಪ್ರಧಾನ ನರಸಿಂಹನಾಯಕ ಹಾಗೂ ಮಹಾಪ್ರಧಾನ ತಿಪ್ಪರಸಯ್ಯನ ಸಾಮಂತನಾದ ಎಚಿಮನಾಯಕರು ಈ ವತ್ತಿಯನ್ನು ಸ್ಥಿರಗೊಳಿಸಿದರೆಂದು ತಿಳಿಸುತ್ತದೆ ಕ್ರಿ ಶ ೧೧೧೮ರಲ್ಲಿ ನುಗುನಾಡನ್ನು ಮಹಾಪ್ರಧಾನ ಹಿರಿಯ ದಣ್ಣಾಯಕ ಗೌಡಯ್ಯನು ಆಳುತ್ತಿದ್ದನೆಂದು ಜೋಡಿ ಕಾಟೂರಿನಲ್ಲಿ ದೊರೆತ ನಂ ಗೂ ೧೫೬ರ ಶಾಸನದಲ್ಲಿ ಹೇಳಿದೆ

ಎರಡನೆಯ ನರಸಿಂಹನ ಅಧಿಕಾರಿಗಳಲ್ಲಿ ಒಬ್ಬನಾದ ಶ್ರೀರಂಗದಣ್ಣಾಯಕನು ಕ್ರಿ ಶ ೧೨೨೧ನೆಯ ವರ್ಷದ (ಗು ವೇ ೮೯) ಶಾಸನದಲ್ಲಿ ಉಕ್ತನಾಗಿದ್ದು, ಆತನು ಹಿರಿಯನಾಡಿನ ಮಹಾಪ್ರಭುವಾದ ಕೊಲುಗಣದ ಶಂಕರಗಾವುಣ್ಡನೊಡನೆ ವಿಜಯನಾರಾಯಣದೇವರಿಗೆ ದಾನವನ್ನು ಕೊಟ್ಟ ವಿಷಯ ಅದರಲ್ಲಿ ಹೇಳಿದೆ ಈ ಶಂಕರಗಾವುಣ್ಡನು ಕ್ರಿ ಶ ೧೨೨೯ನೆಯ ವರ್ಷದ ಕೆಲಸೂರಿನ (ಗು ವೇ ೧೧೧) ಮತ್ತೊಂದು ಶಾಸನದಲ್ಲೂ ಕಾಣಿಸಿಕೊಂಡಿದ್ದಾನೆ ಪ್ರಸ್ತುತ ಸಂಪುಟದಲ್ಲಿ ಇನ್ನಿಬ್ಬರು ಅಧಿಕಾರಿಗಳ ಹೆಸರು ನಮಗೆ ತಿಳಿದುಬರುತ್ತದೆ ಮಹಾಪ್ರಧಾನ, ಸರ್ವಾಧಿಕಾರಿ ಎಂದು ವರ್ಣಿಸಲಾದ ಮಲ್ಲಿಕಾರ್ಜುನ ದಂಡನಾಯಕ ಮತ್ತು ಜಲ್ಲಹ ದಣ್ಣಾಯಕರೆಂಬ ಇನ್ನಿಬ್ಬರು ಸೇನಾನಿಗಳು ಕ್ರಿ ಶ ೧೨೨೨ರ (ನಂ ಗೂ ೩೨೧) ಶಾಸನದಲ್ಲಿ ದಾನಿಗಳಾಗಿ ಕಾಣಿಸಿಕೊಂಡಿದ್ದಾರೆ ಬದನಾಳು ಶಾಸನದಲ್ಲಿ ಸೂಚಿತವಾದ ಕಾಲದ ವಿವರಗಳು ಸರಿಹೊಂದುವುದಿಲ್ಲವಾದರೂ, ಆ ಶಾಸನದ ಕಾಲ ಕ್ರಿ ಶ ೧೨೨೮ರ ಮಾರ್ಚಿ ೧೪ ಎಂದು ಹೇಳಬಹುದು (ನಂ ಗೂ ೨೭೪) ಅಂದು ಕುಮಾರ ಸೋಮೇಶ್ವರನು ರಾಜಧಾನಿ ಕಣ್ಣಾನೂರಿನಿಂದ ಆಳುತ್ತಿದ್ದನೆಂದು ಆ ಶಾಸನದಿಂದ ತಿಳಿದಿದೆ ಆ ಶಾಸನವನ್ನು ಪ್ರೊ ಕೊಯಿಲ್ಪ್ಪೋರವರು ಗಮನಿಸಿದ್ದಾರೆ [1] ಶಾಸನದಲ್ಲಿ ಇಮ್ಮಡಿ ನರಸಿಂಹನ ಹೆಸರನ್ನೇ ಹೇಳಿಲ್ಲ ಇದು ಸೋಮೇಶ್ವರನು ಸ್ವತಂತ್ರವಾಗಿ ಹಾಕಿಸಿದ ಶಾಸನವಾಗಿದೆ ಆದ್ದರಿಂದ ಈ ಶಾಸನದಲ್ಲಿ ಉಕ್ತವಾದಕಾಲದಿಂದಲೇ ಹೊಯ್ಸಳರಾಜ್ಯದ ದಕ್ಷಿಣಭಾಗದ ಆಡಳಿತವನ್ನು ಸೋಮೇಶ್ವರನಿಗೆ ವಹಿಸಿರುವ ಸಾಧ್ಯತೆ ಇದೆ [2]

ಸೋಮೇಶ್ವರನ ೭ ಶಾಸನಗಳಲ್ಲಿ ೪ ಶಾಸನಗಳು ತಮಿಳು ಮತ್ತು ಗ್ರಂಥಾಕ್ಷರಗಳಲ್ಲಿದ್ದು ತಮಿಳು ಭಾಷೆಯಲ್ಲಿವೆ ಹೆಚ್ಚು ಕಡಿಮೆ ಆ ಶಾಸನ ಕಲ್ಲುಗಳೆಲ್ಲಾ ಒಡೆದುಹೋಗಿ ಶಾಸನಗಳ ಬಹುಭಾಗ ಹಾಳಾಗಿವೆ ಕ್ರಿ ಶ ೧೨೪೧ ನೆಯ ವರ್ಷದ ನಂ ಗೂ ೨೫೬ರ ಶಾಸನದಲ್ಲಿ ತರಯೂರು ಪೆರಿಯನಾಡಿನಲ್ಲಿತ್ತೆಂದು ಹೇಳಿದೆ ಕ್ರಿ ಶ ೧೨೫೩ರ ಹೆ ಕೋ ೨೨ರ ಶಾಸನದಲ್ಲಿ ಬಪನಾಡಿನ ಪ್ರಸ್ತಾಪವಿದೆ ಹೆ ಕೋ ೪೮ನೆಯ ಕನ್ನಡ ಶಾಸನದ ಪಾಠವು ಮಾತ್ರ ಸಂಪೂರ್ಣ

---

[1] *The Hoysala Vamśa*, p 185

[2] cf K R Venkataraman *Hoysalas in the Tamil country*, p 15

ವಾಗಿದ್ದು ಇದರ ಕಾಲ ಕ್ರಿ ಶ ೧೨೫೫ ಅದು ಮಲ್ಲಿಕಾರ್ಜುನ ಮತ್ತು ಬಾಣೇಶ್ವರ ದೇವಾಲಯಗಳಿಗೆ ಒಟ್ಟ
ವತ್ತಿಯ ವಿಷಯವನ್ನು ಪ್ರಸ್ತಾಪಿಸುವುದಲ್ಲದೆ ಮಹಾಪ್ರಧಾನ, ಸರ್ವಾಧಿಕಾರಿ ಅಲಾಳದೇವ ದಣ್ಣಾಯಕನ ಅತಿಕಾರ
(ಅಧಿಕಾರ)ವನ್ನು ಕುರಿತು ಹೇಳಿವೆ ಈ ಶಾಸನದ ಭಾಷೆ ಬಹುಮಟ್ಟಿಗೆ ತಮಿಳು ಭಾಷೆಯಿಂದ ಪ್ರಭಾವಿತವಾಗಿರುವುದನ್ನು
ಗಮನಿಸಬಹುದು

ಮೂರನೆಯ ನರಸಿಂಹನ ಪ್ರಸಿದ್ಧನಾದ ಸೇನಾನಿ ಪೆರುಮಾಳದಣ್ಣಾಯಕ ಈತನ ಉಲ್ಲೇಖ ಕ್ರಿ ಶ ೧೨೨೨ನೆಯ
ವರ್ಷದ ನಂ ಗೂ ೨೨೭ನೆಯ ಶಾಸನದಲ್ಲಿದೆ ಪ್ರೊ ಕೊಯೆಲ್ಹೋರವರು ಹೆಗ್ಗಡೆ ಕಲ್ಲಯ್ಯ (ಗು ಪೇ ೮೭) ಮತ್ತು
ಮಹಾಪ್ರಧಾನ, ಸರ್ವಾಧಿಕಾರಿ ಮಲ್ಲಿಕಾರ್ಜುನ (ಗು ಪೇ ೬೪) ಇಬ್ಬರನ್ನೂ ಮೂರನೆಯ ನರಸಿಂಹನ ಮಂತ್ರಿಗಳೆಂದು
ಭಾವಿಸಿದ್ದಾರೆ[1] ಈ ಎರಡೂ ಶಾಸನಗಳಲ್ಲಿ ಸಂವತ್ಸರಗಳ ಹೆಸರನ್ನು ಮಾತ್ರ ಸೂಚಿಸಿದ್ದು ಈ ಸಂವತ್ಸರಗಳು ಮೊದಲನೆಯ
ನರಸಿಂಹ ಮತ್ತು ಮೂರನೆಯ ನರಸಿಂಹ ಇವರಿಬ್ಬರ ಆಳ್ವಿಕೆಯ ಕಾಲದಲ್ಲಿಯೂ ಬಂದಿರುವ ಕಾರಣ ಈ ಶಾಸನಗಳು
ಮೂರನೆಯ ನರಸಿಂಹನ ಕಾಲದ್ದೆಂದು ಭಾವಿಸಲಾಗಿದೆ ಆದರೆ ಶಾಸನಗಳ ಲಿಪಿ ೧೪ನೆಯ ಶತಮಾನಕ್ಕಿಂತಲೂ ೧೨ನೆಯ
ಶತಮಾನಕ್ಕೆ ಸೇರಿದುವೆಂದೇ ಹೇಳಬಹುದು ಅಲ್ಲದೇ ಗು ಪೇ ೬೪ರ ಶಾಸನದಲ್ಲಿ ಅರಸನನ್ನು ವಿಷ್ಣುವರ್ಧನ ಪೊಯಸಳ
ಶ್ರೀವೀರನಾರಸಿಂಹದೇವನೆಂದು ಕರೆಯಲಾಗಿರುವುದರಿಂದ ಆತನು ವಿಷ್ಣುವರ್ಧನನ ಮಗನೆಂದು ಅದು ತೋರಿಸುತ್ತದೆ
ಈ ಸಂದರ್ಭದಲ್ಲಿ ಕ್ರಿ ಶ ೧೧೪೮ನೆಯ ವರ್ಷದ ನಂ ಗೂ ೩೨೨ನೆಯ ಶಾಸನ ಹಾಗೂ ತಾರಣ ಸಂವತ್ಸರದ ನಂ ಗೂ
೩೨೭ನೆಯ ಶಾಸನಗಳಲ್ಲಿ ಮೊದಲನೆಯ ನರಸಿಂಹನನ್ನು ವಿಷ್ಣುವರ್ಧನನಾರಸಿಂಹ ಪೆರುಮಾಳದೇವನೆಂದು ಹೆಸರಿಸಿರು
ವುದನ್ನು ಉದಹರಿಸಬಹುದು ಎಂತಲೇ ಗು ಪೇ ೪೭ ಮತ್ತು ೬೪ನೆಯ ಶಾಸನಗಳನ್ನು ಮೊದಲನೆಯ ನರಸಿಂಹನ
ಕಾಲಕ್ಕೆ ಸೇರಿಸಲಾಗಿದೆ

ಗು. ಪೇ ೩೪ರ ಆಲತ್ತೂರಿನ ಶಾಸನವು ಮೂರನೆಯ ಬಲ್ಲಾಳನಿಗೆ ಸೇರಿದುದಾಗಿದೆ ಅದರ ಕಾಲ ಶಕ
೧೨೦೫ನೆಯ ವಿಜಯ ಸಂವತ್ಸರದ ಫಾಲ್ಗುಣ ಶುದ್ಧ ೧೦ ಶುಕ್ರವಾರ ಈ ವಿವರಗಳು ಸರಿಯಿಲ್ಲ ಶಕವರ್ಷ ಹಾಗೂ
ಸಂವತ್ಸರಗಳಲ್ಲಿ ಹೊಂದಾಣಿಕೆಯಿಲ್ಲ ಶಕವರ್ಷವು ಕ್ರಿ ಶ ೧೨೮೩-೮೪ಕ್ಕೆ ಸರಿಹೊಂದುತ್ತಿದ್ದು ಆಗ ಮೂರನೆಯ
ನರಸಿಂಹನೇ ಇನ್ನೂ ರಾಜ್ಯಭಾರ ಮಾಡುತ್ತಿದ್ದ ಶಾಸನದ ೩-೪ನೆಯ ಸಾಲುಗಳಲ್ಲಿ "ಶ್ರೀಮತು ಪ್ರತಾಪಚಕ್ರವರ್ತಿಯು
ಶ್ರೀ ವೀರಬಲ್ಲಾಳದೇವರಸರು" ಎಂದಿರುವುದರಿಂದ ಪ್ರತಾಪಚಕ್ರವರ್ತಿ ಎಂದರೆ ಮೂರನೆಯ ನರಸಿಂಹ ಹಾಗೂ ಬಲ್ಲಾಳ
(ಮೂರನೆಯ ಬಲ್ಲಾಳ) ಇಬ್ಬರೂ ಒಟ್ಟಿಗೆ ಆ ವರ್ಷದಲ್ಲಿ ಆಳುತ್ತಿದ್ದರೆಂದು ಅರ್ಥೈಸಬಹುದು ಹಾಗಿದ್ದಲ್ಲಿ ಬಲ್ಲಾಳನು
ನರಸಿಂಹನೊಡಗೂಡಿ ರಾಜ್ಯಭಾರ ಮಾಡುತ್ತಿದ್ದನೆಂದು ಹೇಳಬೇಕಾಗುತ್ತದೆ ಒಂದು ವೇಳೆ ವಿಜಯ ಸಂವತ್ಸರವನ್ನೇ
ಗಣನೆಗೆ ತೆಗೆದುಕೊಳ್ಳುವುದಾದರೆ ಅದಕ್ಕೆ ಸಮನಾದ ಶಕವರ್ಷ ೧೨೧೫ ಆಗುತ್ತಿದ್ದು ಅದು ಕ್ರಿ ಶ ೧೨೯೩-೯೪ಕ್ಕೆ
ಸರಿಹೋಗುತ್ತದೆ ಆದರೂ ಶಾಸನದಲ್ಲಿ ಕೊಟ್ಟಿರುವ ಇತರ ವಿವರಗಳು ಪರಸ್ಪರ ಹೊಂದುವುದಿಲ್ಲ ಉಕ್ತ ತಿಥಿಯು
ಕ್ರಿ ಶ ೧೨೯೪ ಫೆಬ್ರುವರಿ ೭ ಭಾನುವಾರದಂದು ಬಂದಿತ್ತು ಆದರೆ ಈ ವೇಳೆಗೆ ಮೂರನೆಯ ಬಲ್ಲಾಳನು ಆಳುತ್ತಿದ್ದನು

ಮಹಾಪ್ರಧಾನ ಪೆರುಮಾಳದಣ್ಣಾಯಕನು ಆಳುತ್ತಿದ್ದನೆಂದು ಶಾಸನದಲ್ಲಿ ಹೇಳಿದ್ದರೂ, ಆ ಪ್ರದೇಶದ ಹೆಸರು
ದೊರೆತಿಲ್ಲ ಆತ ಸಿತಗರಗಂಡ, ನೀಲಗಿರಿ (ಸಾಧಾರ?) ಮುಂತಾದ ಬಿರುದುಗಳನ್ನು ಹೊಂದಿದ್ದ ಆತನೂ ಕ್ರಿ ಶ
೧೨೯೨ನೆಯ ಫೆಬ್ರುವರಿ ೨೦ರ ನಂ ಗೂ ೩೯ನೆಯ ಶಾಸನದಲ್ಲಿ ವರ್ಣಿತನಾಗಿರುವ, ಇನ್ನು ಮೂವರು ಮಂತ್ರಿಗಳೊಡನೆ
ಉಲ್ಲೇಖಿತನಾದ ನೆಯ ದಣ್ಣಾಯಕನ ಮಗನಾದ ಪೆರುಮಾಳದೇವ ದಣ್ಣಾಯಕನೂ ಅನನ್ಯರೆಂದು ಭಾವಿಸ
ಬಹುದು ಅದೇ ವರ್ಷದ ಜೂನ್ ೮ರ (ನಂ ಗೂ ೩೪೦) ಶಾಸನದಲ್ಲಿ ಈ ಪೆರುಮಾಳುದೇವಣ್ಣಾಯಕನ ಪ್ರಸ್ತಾಪವಿದೆ
ನಂ ಗೂ ೩೯ನೆಯ ಶಾಸನದಲ್ಲಿ ಉಕ್ತವಾಗಿರುವ ಭೀಮಯ ದಣ್ಣಾಯಕ ಮತ್ತು ಮಂಚಣದಣ್ಣಾಯಕರ ಪ್ರಸ್ತಾಪವೂ
ಇವರಲ್ಲಿ ಬಂದಿದೆ ಶಾಸನದಲ್ಲಿ ಭೀಮಯನನ್ನು ಗೋಪಿಯ ದಣ್ಣಾಯಕನ ಮಗನೆಂದೂ, ಮಂಚಯನನ್ನು ಅಲ್ಲಾಳದೇವ
ದಣ್ಣಾಯಕನ ಮಗನೆಂದೂ ಹೇಳಲಾಗಿದೆ ಕ್ರಿ ಶ ೧೩೧೦ರಲ್ಲಿ ಪೆರುಮಾಳನ ಮಗನಾದ ಮಾಧವ ದಣ್ಣಾಯಕನು
ಹದಿನಾಲ್ಕುನಾಡನ್ನು ತನ್ನ ರಾಜಧಾನಿಯಾದ ತೆರಕಣಾಂಬಿಯಿಂದ ಆಳುತ್ತಿದ್ದನೆಂಬುದು ಗು ಪೇ ೧೫೨ನೆಯ
ಶಾಸನದಿಂದ ವ್ಯಕ್ತವಾಗಿದೆ ಈ ಮಾಧವ ದಣ್ಣಾಯಕನು ಕ್ರಿ ಶ ೧೩೧೪ರ ನಂ ಗೂ ೩೪೭, ೧೩೧೫ರ ಗು ಪೇ ೨೨೩
ಮತ್ತು ೧೩೮೮ರ ಗು ಪೇ ೧೭೪ನೆಯ ಶಾಸನಗಳಲ್ಲೂ ಉಕ್ತನಾಗಿದ್ದಾನೆ ಈ ಮಾಧವನಿಗೆ ಭರತಜೀಯದಣ್ಣಾಯಕ

[1] *op cit* p 209, note 4

ನೆಂಬ ಮಗನಿದ್ದು ಆತ ಕ್ರಿ ಶ ೧೩೨೦ರಲ್ಲಿ ಅದೇ ಪ್ರದೇಶವನ್ನು ಆಳುತ್ತಿದ್ದ (ಗು ಪೇ ೪೦) ಈ ಪ್ರಾಂತಗಳನ್ನು ಆತನ ಸಹೋದರನಾದ ಕೇತಯ್ಯನು ಕ್ರಿ ಶ ೧೩೨೭ (ಗು ಪೇ ೧೭೯) ಮತ್ತು ಕ್ರಿ ಶ ೧೩೩೨ರಲ್ಲಿ ಆಳುತ್ತಿದ್ದುದು ಕಂಡುಬಂದಿದೆ (ನಂ ಗೂ ೧೩೮)

## ವಿಜಯನಗರ

ಕ್ರಿ ಶ ೧೩೬೮ನೆಯ ವರ್ಷದ ನಂ ಗೂ ೨೫೮ನೆಯ ತಗಡೂರಿನ ಶಾಸನವು ವೀರಬುಕ್ಕಣ್ಣ ವೊಡೆಯ (ಮೊದಲನೆಯ ಬುಕ್ಕ)ನ ಮಗನಾದ ಚಿಕ್ಕಕಂಪಣ್ಣ ವೊಡೆಯನಿಗೆ ಸಂಬಂಧಿಸಿದ ಈ ಅರಸನು ಈಗಿನ ತಮಿಳುನಾಡಿನ ಚೆಂಗಲ್ಪೇಟೆ ಮತ್ತು ಉತ್ತರ ಆರ್ಕಾಟ್ ಹಾಗೂ ದಕ್ಷಿಣ ಕರ್ನಾಟಕದ ಪೂರ್ವಭಾಗದ ಬೆಂಗಳೂರು ಮತ್ತು ಮೈಸೂರು ಜಿಲ್ಲೆಗಳನ್ನೊಳಗೊಂಡ ಪ್ರದೇಶಗಳನ್ನು ಆಳುತ್ತಿದ್ದನೆಂದು ತಿಳಿದುಬರುತ್ತದೆ[1] ಮಧುರೆಯಲ್ಲಿ ಮಹಮದೀಯರ ಆಳ್ವಿಕೆಯನ್ನು ಕೊನೆಗಾಣಿಸಿದವನು ಈತನೇ ಈತ ಕ್ರಿ ಶ ೧೩೬೮-೬೯ರ ತುಂಡು ಶಾಸನದಲ್ಲಿ (ಗು ಪೇ ೧೩೨) ಕುಮಾರನಂಜಣ್ಣನೊಡನೆಯೂ ಹಾಗೂ ಕ್ರಿ ಶ ೧೩೬೨ನೆಯ ವರ್ಷದ ಗು ಪೇ ೧೨ನೆಯ ಶಾಸನದಲ್ಲೂ ಕಾಣಿಸಿಕೊಂಡಿದ್ದಾನೆ ಕ್ರಿ ಶ. ೧೩೬೪ ಡಿಸೆಂಬರ್ ೨೪ರ ಶಾಸನ (ಗು ಪೇ ೧೮) ದಿಂದ ಆ ವೇಳೆಗೆ ಕಂಪಣ್ಣನು ಮೃತಿಹೊಂದಿದ್ದನೆಂದು ತಿಳಿದುಬರುತ್ತದೆ ಆ ಶಾಸನವು ಆತನ ಮಗನಾದ ನಂಜಣ್ಣನು ಮರಣ ಹೊಂದಿದ್ದ ತನ್ನ ಹಿರಿಯನಿಗೆ ಪುಣ್ಯಲಭಿಸಲೆಂದು ಹಳ್ಳಿಯೊಂದನ್ನು ದಾನವಾಗಿ ಕೊಟ್ಟ ವಿಷಯವನ್ನು ಪ್ರಸ್ತುತಪಡಿಸುತ್ತದೆ ಕ್ರಿ ಶ ೧೩೬೪ರ "ಸೆಪ್ಟೆಂಬರ್ ೧ ಮತ್ತು ಡಿಸೆಂಬರ್ ೧೧ರ ನಡುವಣ ಒಂದುದಿನದಲ್ಲಿ" ಕಂಪಣ್ಣನು ಮೃತಿ ಹೊಂದಿರಬಹುದೆಂದು ಸಿವೆಲ್‌ರವರು ಊಹಿಸಿದ್ದಾರೆ[2] ನಂಜಣ್ಣನು ಕ್ರಿ ಶ ೧೩೮೦ರಲ್ಲಿಯೂ ಸಹ ಆ ಪ್ರದೇಶದಲ್ಲಿ ರಾಜಪ್ರತಿನಿಧಿಯಾಗಿ ಆಳುತ್ತಿದ್ದನೆಂದು ತಿಳಿದುಬಂದಿದೆ

ಹೆ ಕೋ ೧೪೯ನೆಯ ತಾಮ್ರಶಾಸನ ಎರಡನೆಯ ಹರಿಹರನ ಆಳ್ವಿಕೆಯ ಕಾಲಕ್ಕೆ ಸೇರಿದುದಾಗಿದೆ ಶಕವರ್ಷ ೧೨೦೦ನೆಯ ಸಿದ್ಧಾರ್ಥಿ ಸಂವತ್ಸರದ ಕಾರ್ತಿಕ ಬಹುಳ ೩೦ ಎಂಬ ತೇದಿಯ ವಿವರಗಳನ್ನೊಳಗೊಂಡ ಈ ಶಾಸನದಲ್ಲಿ ಲಿಪಿಸ್ಖಾಲಿತ್ಯಗಳಿವೆ ಉಕ್ತವಾದ ಈ ಶಾಸನದ ಕಾಲ ಶುದ್ಧ ತಪ್ಪು ಎಂಬುದು ಮೇಲ್ನೋಟಕ್ಕೇ ಸ್ಪಷ್ಟವಾಗುತ್ತದೆ ಸಿದ್ಧಾರ್ಥಿ ಸಂವತ್ಸರವು ಎರಡನೆಯ ಹರಿಹರನ ಆಳ್ವಿಕೆಯ ಕಾಲದಲ್ಲಿ ಬಂದಿದ್ದು ಅದಕ್ಕೆ ಸಮನಾದ ಶಕವರ್ಷ ೧೩೦೧ ಆಗುತ್ತದೆ ಈ ಶಾಸನದ ನೈಜತೆಯ ಬಗೆಗೆ ಸಂದೇಹವುಂಟಾಗುತ್ತದೆ

ಎರಡನೆಯ ದೇವರಾಯನ ಕ್ರಿ ಶ ೧೪೧೫ರ ಶಾಸನವು (ನಂ ಗೂ ೨೮೮) ಉಮ್ಮತ್ತೂರಿನ ರಾಣಿಯರಸ (ಅಧಿಕಾರಿ) ನಾದ ಚಿಕ್ಕದೇವಪ್ಪನನ್ನು ಹೆಸರಿಸುತ್ತದೆ ತ್ರಿಯಂಬಕಪುರದ ತಾಮ್ರಶಾಸನವು (ಗು ಪೇ ೧೪೯) ಎರಡನೆಯ ಬುಕ್ಕನ ಮಗನಾದ ಹರಿಹರನು ಮಾಡಿದ ದಾನವನ್ನು ತಿಳಿಸುತ್ತದೆ ಎರಡನೆಯ ಬುಕ್ಕನಿಗೆ ಹರಿಹರನೆಂಬ ಮಗನಿರಲಿಲ್ಲ ಆದರೆ ಮೊದಲನೆಯ ದೇವರಾಯನಿಗೆ ಆ ಹೆಸರಿನ ಮಗನಿದ್ದ ಶಾಸನವು ದೇವರಾಯನನ್ನು ಹೆಸರಿಸಿಯೇ ಇಲ್ಲ ಅಲ್ಲದೆ ಅದರಲ್ಲಿ ಉಕ್ತವಾಗಿರುವ ಶಕವರ್ಷ ೧೪೩೨ ಸಹ ನಿಶ್ಚಿತವಾಗಿ ತಪ್ಪು ೧೩೪೨ಕ್ಕೆ ಬದಲಾಗಿ ೧೪೩೨ ಎಂದು ತಪ್ಪಾಗಿ ಖಂಡರಿಸಿರಬಹುದೆಂದು ಊಹಿಸಿದರೂ ತೇದಿಯ ಉಳಿದ ವಿವರಗಳು ಹೊಂದಿಕೆಯಾಗುವುದಿಲ್ಲ ಶಾಸನದಲ್ಲಿ ಉಕ್ತವಾದ ಹೇವಿಳಂಬಿ ಸಂವತ್ಸರವನ್ನು ಸರಿಯಾದುದೆಂದು ಭಾವಿಸಿ, ಅದನ್ನು ಕ್ರಿ ಶ ೧೪೧೭ಕ್ಕೆ ಸರಿಹೊಂದಿಸಿದ್ದೇವೆ ಆದರೆ ಕಾಲವನ್ನು ಸಂಖ್ಯೆಗಳಲ್ಲಿ ಸೂಚಿಸದೆ ಪದಗಳಲ್ಲಿ ಸೂಚಿಸಲಾಗಿದೆ ಅದುವರೆಗಿನ ಶಾಸನಭಾಗವು ಸಂಸ್ಕೃತದಲ್ಲಿದ್ದು ಅಲ್ಲಿಂದ ಮುಂದಕ್ಕೆ ಅದು ಕನ್ನಡದಲ್ಲಿ ಮುಂದುವರಿದಿದೆ ಭಾಷಾಪ್ರಯೋಗದಲ್ಲೂ ತಪ್ಪಿದೆ ಎರಡನೆಯ ಬುಕ್ಕನ ಸೋದರಳಿಯನಾದ ಮೂರನೆಯ ಹರಿಹರನು ತನ್ನನ್ನು ಬುಕ್ಕನಮಗನೆಂದು ಕರೆದುಕೊಂಡಿರಬಹುದು ಈ ಪದ್ಧತಿ ಅಪರೂಪವಾದುದೇನಲ್ಲ ಈಗ ಊಹಿಸುವ ಕಾಲದಲ್ಲಿ (ಕ್ರಿ ಶ ೧೪೧೭) ಮೊದಲನೆಯ ದೇವರಾಯ ಆಳುತ್ತಿದ್ದ ಹರಿಹರನು ಶಾಸನದಲ್ಲಿ ತನ್ನ ತಂದೆಯನ್ನು ಹೆಸರಿಸಲಿಲ್ಲವೇಕೆ ? ಇದಕ್ಕೆ ಸಮಾಧಾನ ಹೇಳುವುದು ಕಷ್ಟ ಈ ಎಲ್ಲ ಕಾರಣಗಳಿಂದಾಗಿ ಈ ಶಾಸನದ ಸತ್ಯಾಸತ್ಯತೆಯನ್ನೂ ಸಂದೇಹಿಸಬೇಕಾಗುತ್ತದೆ

---

[1] R Sewell *Historical Inscriptions of Southern India*, p 195 ff

[2] *Ibid*, p 199

ಗು ವೇ ೭೮ನೆಯ ಶಾಸನದ ಕಾಲ ಶಕವರ್ಷ ೧೩೪೪ಕ್ಕೆ ಸಮನಾದ ಕ್ರಿ ಶ ೧೪೨೨ ಆಗಸ್ಟ್ ೨ ತನ್ನ ತಂದೆಯಾದ ದೇವರಾಯ ಮಹಾರಾಯನಿಗೆ ದೇವಲೋಕ ಲಭಿಸಲಿ ಎಂದು ಪ್ರಾರ್ಥಿಸಿ ಆ ಸಲುವಾಗಿ ಮಹಾಮಂಡಲೇಶ್ವರನಾದ ಮೂರನೆಯ ಹರಿಹರನು ನಂಜುಂಡೇಶ್ವರ ದೇವರಿಗೆ ಮತ್ತು ೧೧ ಜನ ಬ್ರಾಹ್ಮಣರಿಗೆ ಕೊಟ್ಟ ದಾನದ ವಿಷಯವನ್ನು ಇದು ತಿಳಿಸುತ್ತದೆ ಇದರಿಂದ ಈ ವೇಳೆಗ ದೇವರಾಯನು ಮೃತಿ ಹೊಂದಿದ್ದನೆಂದು ಊಹಿಸಬಹುದಾಗಿದೆ

ನಂಜನಗೂಡಿನ ರಾಘವೇಂದ್ರಸ್ವಾಮಿ ಮಠದಲ್ಲಿರುವ ತಾಮ್ರಶಾಸನವು (ನಂ ಗೂ ೧೧೦) ಕೃಷ್ಣದೇವರಾಯನು ಉದಯಗಿರಿಯನ್ನು ಜಯಿಸಿದ ನಂತರ ಆ ಜಯೋತ್ಸಾಹದ ಸ್ಮರಣಾರ್ಥವಾಗಿ ಆ ಮಠದ ಅರ್ಚಕರಿಗೆ ಕೊಟ್ಟ ದಾನದ ದಾಖಲೆಯಾಗಿದೆ ಶಾಸನದ ಕಾಲ ಶಕವರ್ಷ ೧೪೧೨ ಈ ತೇದಿಯನ್ನು ಸಂಖ್ಯಾಸಂಕೇತ ಪದಗಳಾದ ನೇತ್ರ, ಇಂದು, ವೇದ, ಭೂ ಎಂಬ ಪದಗಳಿಂದ ಸೂಚಿಸಲಾಗಿದ್ದು, ಅದು ಕ್ರಿ ಶ ೧೪೯೦ಕ್ಕೆ ಸರಿಹೊಂದುತ್ತದೆ ಆದರೆ ಈ ವೇಳೆಗೆ ಇನ್ನೂ ಕೃಷ್ಣದೇವರಾಯನು ಪಟ್ಟಕ್ಕೆ ಬಂದಿರಲಿಲ್ಲ ಕೃಷ್ಣದೇವರಾಯನು ಕ್ರಿ ಶ ೧೫೧೪ರಲ್ಲಿ ಉದಯಗಿರಿಯನ್ನು ಗೆದ್ದನೆಂಬುದು ನಮಗೆ ತಿಳಿದಿದೆ ಒಂದು ವೇಳೆ ಶಾಸನದಲ್ಲಿ ಕಾಲವನ್ನು ಸೂಚಿಸಲು ಸಂಖ್ಯೆಗಳನ್ನು (ಅಂಕಿಗಳಿಂದ) ಬಳಸಿದ್ದಲ್ಲಿ, ಆ ಸಂಖ್ಯೆಗಳನ್ನು ತಪ್ಪಾಗಿ ಕಂಡರಿಸಲಾಗಿದೆ ಎಂದು ಭಾವಿಸಬಹುದಿತ್ತು ಆದರೆ ಇದು ಸಂಖ್ಯಾಸಂಕೇತಪದ (chronogram) ಗಳಿಂದ ಸೂಚಿತವಾಗಿದ್ದು ಅದನ್ನು ಶಕ ೧೪೧೨ ಎಂದೇ ಅರ್ಥೈಸಬೇಕಾಗಿದೆ ಆದ್ದರಿಂದ ಈ ಶಾಸನದ ಸ್ವೈಜತೆಯು ಸಹ ಅನುಮಾನಾಸ್ಪದವಾಗಿದೆ ದುರದೃಷ್ಟವಶಾತ್ ನಾವು ಆ ಶಾಸನದ ಮೂಲಪ್ರತಿಯನ್ನು ಪರೀಕ್ಷಿಸಲು ಮಾಡಿದ ಯತ್ನಗಳು ಫಲಿಸಲಿಲ್ಲ ಆದುದರಿಂದ ಅದರ ಲಿಪಿಯ ಬಗ್ಗೆಯೂ ಏನನ್ನೂ ಹೇಳಲು ಸಾಧ್ಯವಿಲ್ಲ

ಹೆ ಕೋ ೧೩೩ ಮತ್ತು ೧೪೩ನೆಯ ಉಯ್ಯಂಬಳ್ಳಿಯ ಮತ್ತು ಮಗ್ಗೆಯ ಎರಡು ಶಾಸನಗಳೂ ಸಾಳುವ ನರಸಿಂಹನ ಅಧಿಕಾರಿಯಾಗಿದ್ದ ಪ್ರಧಾನ ತಿಪ್ಪರಸಯ್ಯನು ಕ್ರಮವಾಗಿ ಕಿತ್ತೂರಿನ ರಾಮಯ್ಯದೇವರಿಗೂ ಮಗ್ಗೆಯ ಬಾಣೇಶ್ವರ ದೇವರಿಗೂ ಬಿಟ್ಟ ದತ್ತಿಯನ್ನು ಕುರಿತಾಗಿವೆ ಒಂದರಲ್ಲಿ (ಹೆ ಕೋ ೧೩೩) ಕರಾರಿ ಸಾಳುವ ನರಸಿಂಗರಾಜ ವರ್ಮನೆಂದೂ ಇನ್ನೊಂದರಲ್ಲಿ (ಹೆ ಕೋ ೧೪೩) ನರಸಿಂಗರಾಯನೆಂದೂ ಅರಸನನ್ನು ಹೆಸರಿಸಲಾಗಿದೆ ಈ ಎರಡೂ ಶಾಸನಗಳು ನಾಲ್ಕು ದಿನಗಳ ಅಂತರದಲ್ಲಿ, ಕ್ರಿ ಶ ೧೪೯೭ರಲ್ಲಿ, ಅಸ್ತಿತ್ವಕ್ಕೆ ಬಂದವು ಹೆ ಕೋ ೧೩೩ನೆಯ ಶಾಸನದಲ್ಲಿ ರಾಜನನ್ನು ನರಸಿಂಗರಾಜವರ್ಮನೆಂದು ಹೆಸರಿಸಿರುವುದು ಸ್ವಾರಸ್ಯದ ಸಂಗತಿಯಾಗಿದೆ

ಹೆ ಕೋ ೪೯ ಸಾಳುವ ಇಮ್ಮಡಿ ನರಸಿಂಹನ ತಾಮ್ರಶಾಸನ ಇದರಲ್ಲಿ ಕಾಲವನ್ನು 'ಭಾಗ್ಯ ಭಾಗ್ಯೇ' ಎಂಬ ಸಂಕೇತದಿಂದ ಸೂಚಿಸಿದೆ ಕಟಪಯ ಪದ್ಧತಿಯಂತೆ ಇದು ಶಕಕಾಲ ೧೪೧೪ ಎಂದು ಹೇಳಬಹುದು ಇದರಲ್ಲಿ ಅರಸನ ವಂಶಾವಳಿಯನ್ನು ಕೊಟ್ಟಿದೆ ನರಸಿಂಹನು ಅಹೋಬಲದ ಅಧಿದೇವತೆಯಾದ ನರಸಿಂಹನ ವರಪ್ರಸಾದದಿಂದ ಜನಿಸಿದನೆಂದೂ, ಎಂತಲೇ ಆ ದೇವರ ಹೆಸರನ್ನು ಆತನಿಗಿಡಲಾಯಿತೆಂದೂ ಹೇಳಿದೆ ಅರಸನ ಆಣತಿಯಂತೆ, ಅರಸನು ನೀಡಿದ ದ್ರವ್ಯದಿಂದ, ನಾಗನಾಯಕನು ಭಗ್ನವಾಗಿದ್ದ ಕೆರೆಗಳನ್ನು ಜೀರ್ಣೋದ್ಧಾರಗೊಳಿಸಿ, ಹೊಸ ಕೆರೆಗಳನ್ನು ನಿರ್ಮಿಸಿ ಆ ಪ್ರದೇಶದಲ್ಲಿ ನಾಲ್ವತ್ತು ಬ್ರಾಹ್ಮಣರ ಒಂದು ಅಗ್ರಹಾರವನ್ನು ನೆಲೆಗೊಳಿಸಬೇಕೆಂದು ಅರಸನನ್ನು ಪ್ರಾರ್ಥಿಸಿದನು ಅರಸನು ದೇವಸಮುದ್ರ ಪ್ರತಿನಾಮವಾದ ಚಾಕೇನಹಳ್ಳಿಯನ್ನು ಅಗ್ರಹಾರವಾಗಿ ಮಾಡಿದನು ದತ್ತಿ ಆಚಂದ್ರಾರ್ಕತಾರಕವಾಗಿರಲೆಂದು ನಾಗನಾಯಕನು ಅರಸನ ದಾನವನ್ನು ತಾಮ್ರ ಶಾಸನಗಳ ಮೇಲೆ ಬರೆಯಿಸಿಕೊಡಬೇಕೆಂದು ಕೇಳಿಕೊಂಡನೆಂದು ಈ ಶಾಸನದಲ್ಲಿ ಹೇಳಿರುವುದು ಗಮನಾರ್ಹವಾಗಿದೆ ನಾಗನಾಯಕನನ್ನು ಸಂಗೀತ ವಿದ್ಯಾಸರ್ವಸ್ವನೆಂದೂ, ಸಾಹಿತ್ಯರಸ ಜೀವಿತನೆಂದೂ ಬಣ್ಣಿಸಲಾಗಿದೆ

ನಂ ಗೂ ೩೭೭ನೆಯ ಶಾಸನದಲ್ಲಿ ನರಸಣ್ಣನಾಯಕನ ಮನೆಯ ಶಿರಪ್ರಧಾನನೆನಿಸಿದ ತಿಪ್ಪರಸಯ್ಯನು ನೀಡಿದ ದತ್ತಿಯ ವಿಷಯವಿದೆ ರಾಜಾಧಿರಾಜ, ರಾಜಪರಮೇಶ್ವರ ಮತ್ತು ಕಡಹಾರಿಸಾಳುವನೆಂಬ ಬಿರುದುಗಳನ್ನು ನರಸಣ್ಣನಾಯಕನು ಧರಿಸಿದ್ದಾನೆ ಕ್ರಿ ಶ ೧೫೦೨ನೆಯ ವರ್ಷದ ಈ ಶಾಸನಕಾಲದಲ್ಲಿ ಸಾಳುವ ಇಮ್ಮಡಿ ನರಸಿಂಹನು ಆಳುತ್ತಿದ್ದನು ಮೇಲೆ ಚರ್ಚಿಸಿದ ಹೆ ಕೋ ೧೩೩ ಮತ್ತು ೧೪೩ನೆಯ ಶಾಸನಗಳಲ್ಲಿ ಉಕ್ತವಾಗಿರುವ ನರಸಿಂಗರಾಜವರ್ಮ ಮತ್ತು ನರಸಿಂಗರಾಯರನ್ನು ಈ ಇಮ್ಮಡಿ ನರಸಿಂಹನೆಂದು ಗುರುತಿಸಬಹುದು ಆದರೆ ಪ್ರಸ್ತುತ ಶಾಸನದಿಂದ ಈತನು ಹೆಸರಿಗೆ ಮಾತ್ರ ರಾಜನಾಗಿದ್ದು ಆಡಳಿತ ಸೂತ್ರವನ್ನು ತುಳುವರಾಜನಾದ ನರಸಣ್ಣನಾಯಕನೇ ವಹಿಸಿಕೊಂಡಿದ್ದನೆಂಬುದು ಸ್ಪಷ್ಟವಾಗುತ್ತದೆ ಈತನು ಕಡಹಾರಿ ಸಾಳುವನೆಂಬ ಬಿರುದನ್ನು ಧರಿಸಿರುವ ವಿಷಯ ಗಮನಾರ್ಹ ಈ ಮೂರು ಶಾಸನಗಳಲ್ಲಿ ಉಕ್ತನಾಗಿರುವ ತಿಪ್ಪರಸಯ್ಯನು ಒಬ್ಬನೇ ಆಗಿದ್ದಾನೆ

ಆರವೀಡು ವಂಶದ ಬುಕ್ಕನ ಮಗನೂ, ಪಿನ್ನಮನ ಮೊಮ್ಮಗನೂ ಆದ ರಾಮರಾಯನ ಆಳ್ವಿಕೆಗೆ ಸೇರಿದ ಕ್ರಿ ಶ ೧೫೧೩ನೆಯ ವರ್ಷದ ಶಾಸನ (ನಂ ಗೂ ೧೧೩)ದಲ್ಲಿ ಆ ಅರಸನ ವಂಶಾವಳಿಯನ್ನು ಕೊಟ್ಟಿದೆ ಆತನ ರಾಣಿಯಾದ ಲಕ್ಕಾಂಬಿಕೆಗೆ ಜನಿಸಿದ ಶ್ರೀರಂಗನನ್ನು ಈ ಶಾಸನ ಸ್ತುತಿಸಿದೆ ವಿಜಯನಗರದ ಅರಸರು ಸಾಮಾನ್ಯವಾಗಿ ಧರಿಸುತ್ತಿದ್ದ ಹಲವಾರು ಬಿರುದುಗಳನ್ನು ಈತನು ಧರಿಸಿದ್ದಾನೆ ಈ ಶಾಸನವನ್ನು ಕಣ್ಡರಿಸಿದಾತ ಮಂಗಣಾಚಾರ್ಯನ ಮಗ ವೀರಣ ಅರವತ್ತು ವರ್ಷಗಳ ನಂತರ ಆರವೀಡು ಮನೆತನದ ಮೊದಲನೆಯ ಶ್ರೀರಂಗರಾಯನ ಕ್ರಿ ಶ ೧೫೭೬ನೆಯ ವರ್ಷದ ಶಾಸನವನ್ನು ಕಣ್ಡರಿಸಿದಾತನೂ ಇವನೇ (ನಂ ಗೂ ೧೧೨). ಈ ದೃಷ್ಟಿಯಿಂದ ಪ್ರಸ್ತುತ ಶಾಸನವನ್ನೂ ಕೂಟಶಾಸನವೆಂದೇ ಪರಿಗಣಿಸಬೇಕಾಗುತ್ತದೆ ಈ ತಾಮ್ರಶಾಸನದ ಮೂಲಪ್ರತಿಯೂ ನಮಗೆ ದೊರಕಲಿಲ್ಲ

ಗು ವೇ ೧೯೪ರ ಭೀಮನಬೀಡಿನ ಕನ್ನಡ ಶಾಸನವು ನಾಗರೀ ಲಿಪಿಯಲ್ಲಿದೆ ಈ ಶಾಸನದಲ್ಲಿ ಶಕವರ್ಷ ಕೊಟ್ಟಿಲ್ಲ ಆದರೆ ಬಹುಧಾನ್ಯ ಸಂವತ್ಸರ ಶ್ರಾವಣ ಶು ೧೨ ಎಂದು ಕಾಲ ನಿರ್ದೇಶನವಿದೆ ಲಿಪಿಶಾಸ್ತ್ರದ ಆಧಾರದ ಮೇಲೆ ಇದನ್ನು ೧೬ನೆಯ ಶತಮಾನದ್ದೆಂದು ಹೇಳಬಹುದು ಕಾಲವನ್ನು ಸರಿಯಾಗಿ ಗುರುತಿಸಲು ಅವಶ್ಯಕವಾದ ವಿವರಗಳು ಇದರಲ್ಲಿ ಇಲ್ಲ ಆದರೆ ಉಕ್ತವಾಗಿರುವ ಸಂವತ್ಸರವು ಶಕವರ್ಷ ೧೪೪೦ಕ್ಕೆ ಸಮನಾದ ಕ್ರಿ ಶ ೧೫೧೮ರಲ್ಲಿ ಬರುತ್ತದೆ ಮಹಾಮಂಡಲೇಶ್ವರ ಕೃಷ್ಣರಾಯನಿಗೆ ಪುತ್ರಸಂತಾನವಾದ ಸಂದರ್ಭದಲ್ಲಿ ತಾತನ ಅಪ್ಪಣೆಯ ಮೇರೆಗೆ ಗೋವಿಂದರಾಜನು ಶ್ರೀನಿವಾಸಪಂಡಿತ ಮತ್ತು ತಿರುಮಲಪಂಡಿತರಿಗೆ ಬಹುಶಃ ಗ್ರಾಮವೊಂದನ್ನು ದಾನವಾಗಿ ಕೊಟ್ಟ ವಿಷಯವನ್ನು ಇದು ತಿಳಿಸುತ್ತದೆ ಅಷ್ಟು ಸಮಂಜಸವೆನಿಸದಿದ್ದರೂ, ಶಾಸನದಲ್ಲಿ ಉಕ್ತವಾಗಿರುವ ಕೃಷ್ಣರಾಯನನ್ನು ಕೃಷ್ಣದೇವರಾಯನೆಂದು ಗುರುತಿಸಬಹುದೇನೋ! ಕೃಷ್ಣದೇವರಾಯನು ತನ್ನ ಮಗನಾದ ತಿರುಮಲನಿಗೆ ಕ್ರಿ ಶ ೧೫೨೪ರಲ್ಲಿ ಪಟ್ಟಾಭಿಷೇಕವನ್ನು ನೆರವೇರಿಸಿದನೆಂಬುದು, ಆಗ ತಿರುಮಲನಿಗೆ ಕೇವಲ ೬ ವರ್ಷಗಳಾಗಿತ್ತೆಂಬುದು ನಮಗೆ ತಿಳಿದಿದೆ ಎಂದಮೇಲೆ ತಿರುಮಲನು ಕ್ರಿ ಶ ೧೫೧೮ರಲ್ಲಿ ಹುಟ್ಟಿದನೆಂದು ಊಹಿಸಬಹುದು ಪ್ರಸ್ತುತ ಶಾಸನದಲ್ಲಿ ಉಕ್ತವಾಗಿರುವ ಪುತ್ರೋತ್ಸವದ ವಿಷಯವು ಇದೇ ತಿರುಮಲನ ಜನನವನ್ನು ಸೂಚಿಸುತ್ತದೆಂದು ಊಹಿಸಲೂ ಸಾಧ್ಯವಾದೀತು ಬಹುಶಃ ಈ ಶಾಸನದ ಕಾಲಕ್ಕೆ ತಿರುಮಲ ಜನಿಸಿರಬೇಕು ಈ ಶಾಸನದಲ್ಲಿ ಪ್ರಸ್ತಾವವಾಗಿರುವ ಗೋವಿಂದರಾಜನು ಕೃಷ್ಣದೇವರಾಯನ ಅಧೀನದಲ್ಲಿ ಅಧಿಕಾರಿಯಾಗಿದ್ದ ಸಾಳುವ ಗೋವಿಂದರಾಜನೆಂದು ತೋರುತ್ತದೆ ಕ್ರಿ ಶ ೧೫೨೧ರ ಗು ವೇ ೧೩೪ನೆಯ ಮತ್ತೊಂದು ಶಾಸನದಲ್ಲೂ ಈ ಗೋವಿಂದರಾಜನ ಪ್ರಸ್ತಾಪ ಬಂದಿದೆ

ಈ ಸಂಪುಟದಲ್ಲಿ ಇದೇ ತಿರುಮಲರಾಯನ ಮರಣವನ್ನು ಸೂಚಿಸುವ ಶಾಸನ ಸಹ ಇದ್ದಂತಿದೆ ಬಹಳಮಟ್ಟಿಗೆ ಭಗ್ನವಾದ ಈ ಶಾಸನ (ನಂ ಗೂ ೯೩)ದಲ್ಲಿ ಉಕ್ತವಾದ ಕಾಲ ಶಕ ೧೪೫೧ (ಕ್ರಿ ಶ ೧೫೨೯, ಫೆಬ್ರವರಿ ೬) ಇದರಲ್ಲಿ ತಿರುಮಲರಾಯನಿಗೆ ಪುಣ್ಯ ಲಭಿಸಲೆಂದು ದಾನವೊಂದನ್ನು ನೀಡಲಾಯಿತೆಂದಿದೆ ತಿರುಮಲರಾಯನು ಈ ವೇಳೆಗೆ ಮರಣ ಹೊಂದಿದ್ದು ಅವನಿಗೆ ಸದ್ಗತಿ ದೊರಕಲೆಂದು ಈ ದಾನವನ್ನು ನೀಡಿದಂತೆ ತೋರುತ್ತದೆ ಆಳುತ್ತಿದ್ದ ಅರಸನ ಹೆಸರಾಗಲೀ, ಇತರ ವಿವರಗಳಾಗಲೀ ಲಭ್ಯವಿಲ್ಲ ಆದರೆ ಶಾಸನ ಕೃಷ್ಣದೇವರಾಯನ ಕಾಲದ್ದು ತಿರುಮಲನು ತಂದೆಯು ಜೀವಿಸಿದ್ದಾಗಲೇ ಸತ್ತನೆಂಬುದೂ, ಈ ಮನೋವ್ಯಥೆಯಲ್ಲಿಯೇ ಅರಸನೂ ಸತ್ತನೆಂಬುದೂ ತಿಳಿದಿದೆ ಶಾಸನೋಕ್ತ ತಿರುಮಲನು ಈ ಯುವ ರಾಜನೇ ಆಗಿದ್ದಲ್ಲಿ, ಶಾಸನ ಕಾಲಕ್ಕೂ ಮೊದಲು ಆತನು ನಿಧನ ಹೊಂದಿದನೆಂದು ಹೇಳಬಹುದು ಆದರೆ ನ್ಯೂನಿಜನು ಪಟ್ಟಾಭಿಷೇಕವಾದ ಎಂಟು ತಿಂಗಳುಗಳಲ್ಲಿಯೇ ತಿರುಮಲನು ರೋಗಪೀಡಿತನಾಗಿ ಮರಣಹೊಂದಿದನೆಂದು ಹೇಳಿರುವುದನ್ನು ಇಲ್ಲಿ ನೆನಪಿನಲ್ಲಿಡಬೇಕು ಅದು ನಿಜವಾದಲ್ಲಿ ಆತನು ೧೫೨೪–೨೬ರಲ್ಲಿ ನಿಧನನಾಗಿರಬೇಕು ಈ ಹೇಳಿಕೆ ಸಹ ಎಷ್ಟರ ಮಟ್ಟಿಗೆ ನಿಜವೆಂಬುದೂ ಪರಿಶೀಲನಾರ್ಹವೇ

ಶಕವರ್ಷ ೧೪೬೪ಕ್ಕೆ ಸಮನಾದ ಕ್ರಿ ಶ ೧೫೪೩ನೆಯ ಫೆಬ್ರವರಿ ೩ರ ನಂ ಗೂ ೧೧೫ನೆಯ ಶಾಸನವು ಸಲಕರಾಜನ ಮಗನಾದ ತಿರುಮಲರಾಯ ಮಹಾರಾಯನು ಎಮ್ಮೆಬಸವೇಂದ್ರನಿಗೆ ಗ್ರಾಮವನ್ನು ದತ್ತಿಕೊಟ್ಟ ವಿಷಯವನ್ನು ತಿಳಿಸುತ್ತದೆ ಈ ವೇಳೆಗೆ ಅಚ್ಯುತರಾಯನು ಮರಣಹೊಂದಿದ್ದನು ಆತನ ಮಗನಾದ ಯುವರಾಜ ವೆಂಕಟನ ಪ್ರತಿನಿಧಿಯಾಗಿ ಸಲಕರಾಜ ತಿರುಮಲನು ಅಧಿಕಾರ ಸೂತ್ರಗಳನ್ನು ವಹಿಸಿದ್ದು, ಕ್ರಮೇಣ ತಾನೇ ಸಿಂಹಾಸನಾರೂಢನಾಗಲು ಪ್ರಯತ್ನಿಸಿದನೆಂಬುದು ತಿಳಿದ ವಿಷಯವೇ ಪ್ರಸ್ತುತಶಾಸನವು ತಿರುಮಲನು ಸ್ವತಂತ್ರನಾಗಿ ತನ್ನ ಹೆಸರಿನಲ್ಲಿಯೇ ದಾನಗಳನ್ನು ನೀಡುತ್ತಿದ್ದ ಆ ಕಾಲದ್ದಾಗಿದೆ ಶಾಸನದಲ್ಲಿ ಅವನು ಸಾರ್ವಭೌಮಸೂಚಕವಾದ ಎಲ್ಲ ಬಿರುದುಗಳನ್ನೂ ಧರಿಸಿದುದು ಕಂಡುಬಂದಿದೆ ದಾನವನ್ನು ಪಡೆದ ಎಮ್ಮೆಬಸವೇಂದ್ರನು ಒಬ್ಬ ವಿರಕ್ತಶೈವಗುರು ದತ್ತಿಯಾಗಿ ಕೊಡಲಾದ ಕೊಮ್ರಕೆರೆ ಗ್ರಾಮವು ಹಸ್ತಿನಾವತಿವಳಿತದಲ್ಲಿರುವ ಮೂಡನಾಡಿನ ಕುರುಗೋಡು ಸೀಮೆಯಲ್ಲಿದೆ ಈ ಗ್ರಾಮವು ಬಳ್ಳಾರಿ

ಜಿಲ್ಲೆಯಲ್ಲಿರುವ ಕುರುಗೋಡಿನ ಸಮೀಪದಲ್ಲಿನ ಒಂದು ಗ್ರಾಮವಾಗಿರಬಹುದು ಈ ವೀರಶೈವ ಗುರು ಬಹುಶಃ ಹೊಸ ಪೇಟೆಯ ಬಳಿ ಜಂಬುನಾಥ ಬೆಟ್ಟದ ಮೇಲೆ ತನ್ನ ಮಠವನ್ನು ಹೊಂದಿದ್ದನೆಂದು ಹೇಳಲಾಗಿದ ಈತನು ಕಾಲಜ್ಞಾನದ ಕರ್ತೃ ಈ ವಿಷಯ ಶಾಸನದಲ್ಲೇ ಉಕ್ತವಾಗಿದೆ ನಂಜನಗೂಡಿನಲ್ಲಿರುವ ರಾಘವೇಂದ್ರಸ್ವಾಮಿಮಠದವರ ವಶಕ್ಕೆ ಈ ತಾಮ್ರ ಶಾಸನವು ಹೇಗೆ ಬಂತೆಂಬುದು ತಿಳಿದುಬಂದಿಲ್ಲ

## ಉಮ್ಮತ್ತೂರಿನ ಪಾಳೆಯಗಾರರು

ರೈಸ್‌ರವರು ಎ ಕ ಸಂಪುಟ IVರ ಪೀಠಿಕೆಯ ಭಾಗದಲ್ಲಿ ಈ ಪಾಳೆಯಗಾರರ ವಂಶಾವಳಿಯನ್ನು ಕೊಟ್ಟಿದ್ದಾರ ಪ್ರಸ್ತುತ ಸಂಪುಟದಲ್ಲಿ ಪ್ರಕಟವಾಗಿರುವ ಶಾಸನಗಳಷ್ಟನ್ನೇ ಆಧರಿಸಿ ಈ ಪಾಳೆಯಗಾರರ ವಂಶಾವಳಿಯನ್ನು ವಿಶ್ಲೇಷಿಸಿದಾಗ ಈ ವರೆಗೆ ತಿಳಿದಿದ್ದ ಅಂಶಗಳಿಗಿಂತ ಭಿನ್ನವಾದ ಹಲವಾರು ವಿಷಯಗಳು ಗೋಚರವಾಗಿವೆ

ಕ್ರಿ ಶ ೧೪೩೦ನೆಯ ವರ್ಷದ ಗು ವೇ ೨೪ನೆಯ ಶಾಸನದಲ್ಲಿ ವೀರಸೋವಣ್ಣವೊಡೆಯನ ಮಗನಾದ ಮಹಾ ಮಂಡಲೇಶ್ವರ ಚಿಕ್ಕವೊಡೆಯನು ತೆರಕಣಾಂಬಿ ರಾಜ್ಯವನ್ನು ಆಳುತ್ತಿದ್ದನೆಂದು ಹೇಳಿದೆ ಈತ ಉಮ್ಮತ್ತೂರು ಕುಟುಂಬಕ್ಕೆ ಸೇರಿದವನೆಂಬುದಕ್ಕೆ ಅವಶ್ಯಕವಾದ ಆಧಾರಗಳಿಲ್ಲ ಆ ಪಾಳೆಯಗಾರರು ಹೊಂದಿದ್ದ ಯಾವ ಪ್ರಶಸ್ತಿ ಗಳನ್ನೂ ಈತ ಶಾಸನದಲ್ಲಿ ಹೊಂದಿಲ್ಲ ಕ್ರಿ ಶ ೧೪೬೭ನೆಯ ವರ್ಷದ ನಂ ಗೂ ೧೮೧ನೆಯ ಶಾಸನವು ಉಮ್ಮತ್ತೂರಿನ ಸೋಮಯ್ಯದೇವನನ್ನು ಕುರಿತದ್ದಾಗಿದೆ ಈ ಶಾಸನವು ಒಡೆದಿದ್ದು ಆತನನ್ನು ಸ್ತುತಿಸುವ ಶಾಸನದ ಭಾಗವು ನಷ್ಟವಾಗಿದ ಆತನು ನಂಜುಂಡೇಶ್ವರ ದೇವರ ಭಕ್ತನೆಂದು ಹೇಳಿದ ಎರಡು ವರ್ಷಗಳ ನಂತರದ ಶಕ ೧೩೯೧ಕ್ಕೆ ಸಮನಾದ ಕ್ರಿ ಶ ೧೪೬೯ರ ಗು ಪೇ ೧೭೬ನೆಯ ಶಾಸನದಲ್ಲಿ ಸೋಮರಾಯವೊಡೆಯನ ಮಗನಾದ ವೀರಗಜಬೇಟೆಕಾಱ ದೇವರಾಜವೊಡೆಯನ ಉಲ್ಲೇಖವಿದೆ ಆತ ಕುಡುಗುನಾಡನ್ನು ಆಳುತ್ತಿದ್ದಂತೆ ಕಂಡುಬರುತ್ತದೆ ಕ್ರಿ ಶ ೧೪೮೨ರ ಚಿಕ್ಕಣಾಪುರದ ಶಾಸನದಲ್ಲಿ ತೆರಕಣಾಂಬಿಯ ವೀರಭದ್ರದೇವರಿಗೆ ಮಹಾಮಂಡಲೇಶ್ವರ ವೀರನಂಜರಾಯವೊಡೆಯನು ಬಿಟ್ಟ ದತ್ತಿಯ ವಿಷಯವನ್ನು ಪ್ರಸ್ತಾಪಿಸಲಾಗಿದೆ ಈತನು ತೆರಕಣಾಂಬಿನಾಡಿನಲ್ಲಿ ಆಳುತ್ತಿದ್ದನೆಂದು ತರ್ಕಿಸಲು ಅವಕಾಶವಿದೆ ಆದರೆ ಸಾಮಾನ್ಯವಾಗಿ ಉಮ್ಮತ್ತೂರಿನ ಅರಸರು ಹೊಂದಿದ್ದ ಫೇಣಾಂಕ ಚಕ್ರೇಶ್ವರ, ವೆಸಾಳಿಹನುಮ ಮುಂತಾದ ಬಿರುದುಗಳು ಈ ಮೇಲ್ಕಾಣಿಸಿದ ಶಾಸನಗಳಲ್ಲಿ ಉಕ್ತವಾಗಿಲ್ಲ

ಶಕ ೧೪೦೦ರ (ಕ್ರಿ ಶ ೧೪೭೮) ಗು ವೇ ೧೭೮ನೆಯ ಶಾಸನದಲ್ಲಿ ಈ ಬಿರುದುಗಳನ್ನು ಧರಿಸಿದ್ದ ಅರಸರ ವಂಶಾವಳಿಯನ್ನು ಈ ಕೆಳಗೆ ಕಾಣಿಸಿದಂತೆ ಕೊಟ್ಟಿದೆ

ವೀರಹನುಮಪ್ಪಒಡೆಯ
|
ಇಮ್ಮಡಿರಾಯ
|
ದೇವಣ್ಣ ಒಡೆಯ — ಬೆಟ್ಟಿಯ ನಂಜರಾಯ ಒಡೆಯ

ಈ ನಂಜರಾಯ ಒಡೆಯನು ಕ್ರಿ ಶ ೧೪೮೯ (ಗು ನೇ ೧೨೦) ಕ್ರಿ ಶ ೧೪೯೦ (ನಂ ಗೂ ೨೫೯) ಕ್ರಿ ಶ ೧೪೯೨ (ನಂ ಗೂ ೩೩೪, ಮತ್ತು ಗು ಪೇ ೧೩೫), ಕ್ರಿ ಶ ೧೪೯೫ (ನಂ ಗೂ ೩೩೫ ಮತ್ತು ೩೩೬) ಮತ್ತು ಕ್ರಿ ಶ ೧೫೦೪ (ಗು ಪೇ ೧೧೫ ಮತ್ತು ೧೧೪)ನೆಯ ವರ್ಷಗಳ ಶಾಸನಗಳಲ್ಲಿ ಸಹ ಕಾಣಿಸಿಕೊಂಡಿದ್ದಾನೆ

ಕ್ರಿ ಶ ೧೪೯೭ರ ಶಾಸನದಲ್ಲಿ ವೀರನಂಜರಾಯನ ಮಗನಾದ ಚನ್ನ ನಂಜರಾಯಒಡೆಯನು ಮಾಡಿದ ದಾನದ ಪ್ರಸ್ತಾಪವಿದೆ ಆದರೆ ಕ್ರಿ ಶ ೧೫೦೪ರಲ್ಲಿ ಪುನಃ ನಂಜರಾಯನೇ ದಾನಿಯಾಗಿರುವುದನ್ನು ನೋಡಿದ್ದೇವೆ ಕ್ರಿ ಶ ೧೫೩೦ರ ಶಾಸನದಲ್ಲಿ ಮಲ್ಲರಾಜ ಒಡೆಯನ ಪ್ರಸ್ತಾಪವಿದೆ ಆದರೆ ಈತನಿಗೆ ನಂಜರಾಜನೊಡನೆ ಇದ್ದ ಸಂಬಂಧ ತಿಳಿದು ಬಂದಿಲ್ಲ

ಪ್ರಸ್ತುತ ಸಂಪುಟದಲ್ಲಿ ಪ್ರಕಟವಾಗಿರುವ ಶಾಸನಗಳನ್ನು ಆಧರಿಸಿ ಈ ವಿವರಗಳನ್ನು ಚರ್ಚಿಸಿದ್ದೇವೆ ರೈಸ್‌ರವರು ಕೋಟೆಯ ನಾಯಕರ ವಿಷಯವನ್ನು ಪ್ರಸ್ತಾಪಿಸಿ, ಕೋಟೆ ಎಂಬುದು ಗೋಪಾಲಸ್ವಾಮಿಬೆಟ್ಟದ ಮೇಲಿರುವ ಬೆಟ್ಟದಕೋಟೆ ಎಂದು ಗುರುತಿಸಿದ್ದಾರೆ 'ಚೇರಚೋಳಪಾಂಡ್ಯ ಮೂವರುರಾಯರಗಂಡ', 'ನೀಲಗಿರಿಸಾಧಾರವೊಡೆಯ' ಅಥವಾ 'ನೀಲಗಿರಿನಾಡಾಳ್ವ' ಎಂಬ ಬಿರುದುಗಳನ್ನು ಹೊಂದಿದ್ದ ಆ ನಾಯಕರ ಹೆಸರುಗಳನ್ನೂ ಪಟ್ಟಿಮಾಡಿದ್ದಾರೆ ಪ್ರಸ್ತುತ ಸಂಪುಟದಲ್ಲಿ ಈ ಬಿರುದುಗಳನ್ನು ಹೊಂದಿದ್ದ ಕೆಲವರು ಕಂಡುಬಂದಿದ್ದಾರೆ ಕ್ರಿ ಶ ೧೫೦೪, ಆಗಸ್ಟ್ ೧೫ರ ಶಾಸನದಲ್ಲಿ (ಹೆ ಕೋ ೨೮) ದೇವರಾಜವೊಡೆಯನ ಪ್ರಸ್ತಾಪವಿದೆ ಹೆಸರಿನ ಸಾಮ್ಯದಮೇಲೆ ಅದೇ ವರ್ಷದ ಆಗಸ್ಟ್ ೨೬ರ ನಂ ಗೂ ೧೫೭ನೆಯ ಶಾಸನದಲ್ಲಿ ಉಕ್ತನಾಗಿರುವ ದೇವರಾಜನೂ ಈತನೂ ಒಬ್ಬನೆಂದೇ ಭಾವಿಸಬಹುದಾಗಿದೆ ಆದರೆ ಅದೇ ತೇದಿಯ (ಕ್ರಿ ಶ ೧೫೦೪, ಆಗಸ್ಟ್ ೧೫) ಇನ್ನೊಂದು ಶಾಸನವು (ನಂ ಗೂ ೧೯೫) ದೇವರಾಜ ಒಡೆಯನು ಧರಿಸಿದ್ದ ಬಿರುದುಗಳನ್ನೇ ಹೊಂದಿದ್ದ ಮೂಡಣಕೋಟೆಯ ಗೋವಣ್ಣ ಒಡೆಯನನ್ನು ಪ್ರಸ್ತಾಪಿಸಿದೆ ಇವರಿಬ್ಬರ ಸಂಬಂಧವೆಂತಹುದು ? ಇನ್ನೊಂದು ಕಡೆ, ಅದೇ ಕಾಲದಲ್ಲಿ ವೀರನಂಜರಾಯನು ಉಮ್ಮತ್ತೂರಿನ ಪಾಳೆಯಗಾರನಾಗಿದ್ದುದು ಕಂಡುಬರುತ್ತದೆ

ಇಲ್ಲಿ ನಾವು ಒಂದು ಊಹೆಯನ್ನು ಮಾಡಬಹುದು ಗು ವೇ ೧೭೮ನೆಯ ಶಾಸನದಲ್ಲಿ ನಿರೂಪಿಸಲಾಗಿರುವ ವಂಶಾವಳಿಯನ್ನು ಮೇಲೆ ಕೊಟ್ಟಿದ್ದೇವಷ್ಟೆ ಅದರಲ್ಲಿ ಬರುವ ಇಮ್ಮಡಿರಾಯನಿಗೆ ದೇವಣ್ಣ ಮತ್ತು ವೀರನಂಜರಾಯನೆಂಬಿಬ್ಬರು ಮಕ್ಕಳಿದ್ದಿರಬೇಕು ಕಾರಣಾಂತರಗಳಿಂದ ಹಿರಿಯನಾದ ದೇವಣ್ಣನು ಮೂಡಣಕೋಟೆಯ ಸುತ್ತಲಿನ ಪ್ರದೇಶದಲ್ಲಿ ತನ್ನದೇ ಆದ ಪಾಳೆಯವೊಂದನ್ನು ರೂಪಿಸಿಕೊಂಡಿರಬಹುದೇ ? ಗೋವಣ್ಣ ಒಡೆಯನು ಈ ದೇವಣ್ಣನ ಮಗನಾಗಿರಬಹುದೇ ?

ಕ್ರಿ ಶ ೧೫೦೬ (ಶಕ ೧೪೨೭)ನೆಯ ಗು ವೇ ೨೬ನೆಯ ಶಾಸನ ವೀರನರಸಿಂಹನ ಆಳ್ವಿಕೆಯ ಕಾಲದ್ದು ಇದರಲ್ಲಿ 'ಪೆನುಗೊಂಡಚಕ್ರೇಶ್ವರ' ಬಿರುದಾಂಕಿತನಾದ ದೇವಣ ಒಡೆಯನ ಮಗ ವೀರಚಿಕ್ಕರಾಜ ಒಡೆಯನು ತೆರಕಣಾಂಬೆನಾಡನ್ನು ಆಳುತ್ತಿದ್ದನೆಂದಿದೆ ಈ ದೇವಣ್ಣನೇ ದೇವರಾಜ ಒಡೆಯ ಗು.ಪೇ ೧೭೬ನೆಯ ಶಾಸನದಲ್ಲಿ ಉಕ್ತನಾದ ಸೋಮರಾಯ ಒಡೆಯನೇ ಇಮ್ಮಡಿರಾಯ ಒಡೆಯನೆಂದು ಭಾವಿಸಿದಲ್ಲಿ ಚಿಕ್ಕರಾಯನು ಇಮ್ಮಡಿರಾಯನ ಮೊಮ್ಮಗನಾಗುತ್ತಾನೆ ಮಲ್ಲರಾಜನೆಂಬುದು ಈತನ ಇನ್ನೊಂದು ಹೆಸರಾಗಿರಬಹುದು [1] ಇವುಗಳನ್ನೆಲ್ಲಾ ಕ್ರೋಡೀಕರಿಸಿ ಉಮ್ಮತ್ತೂರಿನ ಪಾಳೆಯಗಾರರ ವಂಶಾವಳಿಯನ್ನು ಹೀಗೆ ರೂಪಿಸಬಹುದು

ಹನುಮಪ್ಪ ಒಡೆಯ

ಇಮ್ಮಡಿರಾಯಒಡೆಯ (ಸೋಮರಾಯಒಡೆಯ)

ದೇವಣ್ಣ ಒಡೆಯ (ಕ್ರಿ ಶ ೧೪೮೮, ೧೫೦೪)

ನಂಜರಾಜ (ಕ್ರಿ ಶ ೧೪೮೨–೧೫೦೪)

ಚನ್ನ ನಂಜರಾಜ (ಕ್ರಿ ಶ ೧೪೯೭)

ಚಿಕ್ಕರಾಯ (ಮಲ್ಲರಾಜ)

ಗೋವಣ್ಣ ಒಡೆಯ

ಮಲ್ಲರಾಜ (ಕ್ರಿ ಶ ೧೫೩೦)

ಈ ಮೇಲಿನ ವಿವೇಚನೆಯಿಂದ ಕ್ರಿ ಶ ೧೫೦೪ರಿಂದ ೧೫೩೦ರ ವರೆಗೆ ಈ ಪಾಳೆಯಗಾರರ ಶಾಸನಗಳಿಲ್ಲದಿರುವ ಅಂಶ ವ್ಯಕ್ತವಾಗುತ್ತದೆ ಕೃಷ್ಣದೇವರಾಯನು ತನ್ನ ಆಳಿಕೆಯ ಕಾಲದಲ್ಲಿ (ಕ್ರಿ ಶ ೧೫೦೯–೨೯) ಉಮ್ಮತ್ತೂರಿನ

---

[1] K A Nılakanta Sastrı and N Venkataramanayya *Further Sources of Vıjayanagara Hıstory*, I, pp 181–83

ಒಬ್ಬ ಪಾಳೆಯಗಾರನನ್ನು ಅಣಿದ ವಿಷಯ ನಮಗೆ ತಿಳಿದಿದೆ ಬಹುಶಃ ಆತನು ಆಳುತ್ತಿರುವವರೆಗೂ ಈ ಪಾಳೆಯಗಾರರು ತಮ್ಮ ಪಾಳೆಯದ ಮೇಲಿನ ಅಧಿಕಾರವನ್ನು ಕಳೆದುಕೊಂಡಿದ್ದರು ಕ್ರಿ ಶ ೧೫೩೦ರವರೆಗೂ ಇವರ ಶಾಸನಗಳು ಇಲ್ಲ ಆದರೆ ಇಲ್ಲಿ ಒಂದು ಪ್ರಶ್ನೆ ಏಳುತ್ತದೆ ಸಾಹಿತ್ಯಿಕ ಆಧಾರಗಳಿಂದ ಕೃಷ್ಣದೇವರಾಯನು ಅಡಗಿಸಿದ ಉಮ್ಮತ್ತೂರಿನ ಪಾಳೆಯಗಾರನ ಹೆಸರು ಗಂಗರಾಜನೆಂಬುದು ತಿಳಿದಿದೆ ಆದರೆ ಶಾಸನಗಳಲ್ಲಿ ಈ ಗಂಗರಾಜನ ಉಲ್ಲೇಖವೇ ಇಲ್ಲ. ಕ್ರಿ ಶ ೧೫೦೪ನೆಯ ಶಾಸನದಲ್ಲಿ ಕಾಣಿಸಿಕೊಳ್ಳುವಾತ ನಂಜರಾಜ ಸಾಹಿತ್ಯಿಕ ಆಧಾರಗಳಲ್ಲಿ ಉಕ್ತನಾದ ಗಂಗರಾಜನು ಈ ನಂಜರಾಜನೆಂದೇ ತೋರುತ್ತದೆ

ಶಕ ೧೪೩೪ಕ್ಕೆ ಸಮನಾದ ಕ್ರಿ ಶ ೧೫೧೨ರ ಡಿಸೆಂಬರ್ ೯ನೆಯ ದಿನಾಂಕದ ನಂ ಗೂ ೩೦೭ನೆಯ ನರಸಿಂಹವರ್ಮನ ಮಗನಾದ ಕೃಷ್ಣವರ್ಮಮಹಾಧಿರಾಜನ ಶಾಸನದಲ್ಲಿ ಆತನ ಅಧಿಕಾರಿಯೊಬ್ಬನ, ಹಾಗೂ ತಲಕಾಡಿನ ಪ್ರಸ್ತಾಪವಿದೆ ಅಧಿಕಾರಿಯ ಹೆಸರು ಸ್ಪಷ್ಟವಾಗಿಲ್ಲ ಶಾಸನೋಕ್ತ ಕೃಷ್ಣವರ್ಮಮಹಾಧಿರಾಜನು ಕೃಷ್ಣದೇವರಾಯನೇ ಆಗಿದ್ದಲ್ಲಿ, ಈ ಶಾಸನದ ಕಾಲದ ವೇಳೆಗೆ ತಲಕಾಡು ಮತ್ತು ಉಮ್ಮತ್ತೂರುಗಳನ್ನು ಕೃಷ್ಣದೇವರಾಯನು ವಶಪಡಿಸಿಕೊಂಡಿದ್ದನೆಂದು ಊಹಿಸಬಹುದು ಏನಿದ್ದರೂ ಕ್ರಿ ಶ ೧೫೧೩ರ ಅಕ್ಟೋಬರ್ ೪ರ ವೇಳೆಗೆ ಉಮ್ಮತ್ತೂರಿನ ಪಾಳೆಯಗಾರರನ್ನು ಸೋಲಿಸಿ, ಸಾಳುವ ಗೋವಿಂದರಾಜನನ್ನು ತೆರಕಣಾಂಬಿಸೀಮೆಯ ಪ್ರಾಂತಾಧಿಕಾರಿಯಾಗಿ ನೇಮಿಸಿದುದಂತೂ ಖಚಿತ (ಗು ಸೇ ೧೩೭)[1]

## ಮೈಸೂರಿನ ಒಡೆಯರು

ಪ್ರಸ್ತುತ ಸಂಪುಟದಲ್ಲಿ ಮೈಸೂರು ಒಡೆಯರಿಗೆ ಸಂಬಂಧಿಸಿದ ಐವತ್ತಕ್ಕೂ ಮಿಕ್ಕಿದ ಶಾಸನಗಳು ಈ ಮನೆತನದ ಕೊನೆಯ ಅರಸರಾದ ಜಯಚಾಮರಾಜ ಒಡೆಯರು ೨೩-೯-೭೪ರಲ್ಲಿ ವಿಧಿವಶರಾದರು ಈ ಅರಸರ ವಂಶಾವಳಿಯನ್ನು ರೂಪಿಸುವಲ್ಲಿ ಅನೇಕ ತೊಡಕುಗಳಿವೆ ಶಕ ೧೫೭೭ಕ್ಕೆ ಸಮನಾದ ಕ್ರಿ ಶ ೧೬೫೫ರ ಕಂಠೀರವ ನರಸರಾಜನ ಗಜ್ಜಿಗನಹಳ್ಳಿ ತಾಮ್ರಶಾಸನದಲ್ಲಿ (ನಂ ಗೂ ೨೧೨) ಇವರ ಒಂದು ವಂಶಾವಳಿಯನ್ನು ಕೊಟ್ಟಿದೆ ವಿಜಯನಗರದ ಇಮ್ಮಡಿ ವೆಂಕಟಪತಿರಾಯನು ಘನ ಶೈಲ-ಪೆನುಗೊಂಡ-ದಿಂದ ಆಳುತ್ತಿದ್ದನೆಂದು ಇದು ಹೇಳುತ್ತದೆ ಮುಂದುವರಿದು ಗೋದಾವರೀ ಪ್ರದೇಶದಲ್ಲಿ ವೈಭವದಿಂದ ಆಳಿದ ಅರಸರು, ಕರ್ನಾಟಕಕ್ಕೆ ಬಂದು ಇಲ್ಲಿ ಆಳಿದರೆಂದು ಹೇಳಿ, ಚಾಮರಾಜ, ಆತನ ಮಗ ಬೆಟ್ಟದ ಚಾಮರಾಜ ಮತ್ತು ಮೊಮ್ಮಗ ಕಂಠೀರವನರಸ ರಾಜರನ್ನು ಶಾಸನ ಪ್ರಸ್ತಾಪಿಸಿದೆ ಚಾಮರಾಜನಿಗೂ ಮೊದಲಿನವರು ಗೋದಾವರೀ ಪ್ರದೇಶದ ಯಾವಭಾಗದಲ್ಲಿ ಆಳುತ್ತಿದ್ದರೆಂಬುದನ್ನಾಗಲಿ, ಅವರು ಕರ್ನಾಟಕಕ್ಕೆ ಬರಲು ಕಾರಣಗಳನ್ನಾಗಲೀ ಶಾಸನ ಸ್ಪಷ್ಟೀಕರಿಸಿಲ್ಲ ಚಾಮರಾಜನಿಗೂ ಮೊದಲು ಮೈಸೂರಿನಲ್ಲಿ ಈ ಮನೆತನದ ಇತರರು ಆಳಿದರೆಂದೂ, ಬೆಟ್ಟದ ಚಾಮರಾಜನ ನಂತರ ಆಳಿದವನು ಇಮ್ಮಡಿ ರಾಜಒಡೆಯನೇ ಹೊರತು ಕಂಠೀರವನರಸರಾಜನಲ್ಲವೆಂಬುದೂ, ನಮಗೆ ತಿಳಿದಿದೆ ರಾಜಒಡೆಯರ ಮೊಮ್ಮಗನಾದ ಆರನೆಯ ಚಾಮರಾಜನ ಬಳಿಕ ಈ ಇಮ್ಮಡಿ ರಾಜ ಒಡೆಯನು ಒಂದು ವರ್ಷಕಾಲ ಮಾತ್ರ ಆಳಿದನು ಮೈಸೂರು ಜಿಲ್ಲೆಯ ಎಲ್ಲ ಶಾಸನಗಳೂ ಪ್ರಕಟವಾಗುವಾಗ ಇದಕ್ಕೆ ಸಂಬಂಧಿಸಿದ ಎಲ್ಲ ವಿವರಗಳನ್ನು ಚರ್ಚಿಸಲಾಗುತ್ತದೆ ಕಲಿಯುಗ ೪೭೨೩, ಶಕವರ್ಷ ೧೫೪೭ಕ್ಕೆ ಸಮನಾದ ಕ್ರಿ ಶ ೧೬೨೪-೨೫ನೆಯ ವರ್ಷದ ಮುಳ್ಳೂರು ಶಾಸನ (ಹೆ ಕೋ ೯೭)ದಲ್ಲಿ ಉಕ್ತನಾಗಿರುವ ಚಾಮರಾಜನು, ಆರನೆಯ ಚಾಮರಾಜನೆಂದು ತೋರುತ್ತದೆ

ಶಕ ೧೫೭೮ (ಕ್ರಿ ಶ ೧೬೪೪)ನೆಯ ನಂ ಗೂ ೧೪ನೆಯ ಶಾಸನವನ್ನು ನಂದಿಯ ವಿಗ್ರಹವೊಂದರ ಪೀಠದ ಮೇಲೆ ಕೆತ್ತಿದೆ ಇದು ಮೈಸೂರಿನ ಚಾಮರಾಜ ಒಡೆಯರ ಮಗನಾದ ದಳವಾಯಿ ವಿಕ್ರಮರಾಯನ ಸೇವೆ ಎಂದು ಶಾಸನದಲ್ಲಿ ಹೇಳಿದೆ. ಈ ಚಾಮರಾಜ ಒಡೆಯನು ಯಾರು ? ರಾಜಒಡೆಯರ ಸೋದರನಾದ ಬೆಟ್ಟದ ಚಾಮರಾಜನ ಮಗ (natural son) ಎಂಬುದು ಒಂದು ಅಭಿಪ್ರಾಯ ಆದರೆ ಶಾಸನವೊಂದರಲ್ಲಿ ವಿಕ್ರಮರಾಯನು ರಾಜಒಡೆಯರ ಮಗನೆಂದು ಹೇಳಿದೆ [2]

[1] ಮೇಲೆ ನಮೂದಿಸಲಾದ ಗ್ರಂಥದ ಪುಟ ೩೦೦ ಹಾಗೂ ಅಡಿಟಿಪ್ಪಣಿಯೊಂದಿಗೆ ಹೋಲಿಸಿ

[2] S K Aiyangar *Ancient India and South Indian History and Culture*, II, p 222 and note

